RNI No. **KARBIL/2001/47147**



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – ***IV-A*** | ಬೆಂಗಳೂರು, ಸೋಮವಾರ, ಡಿಸೆಂಬರ್ ೧೦, ೨೦೧೨ (ಮಾರ್ಗಶಿರ ೧೯, ಶಕ ವರ್ಷ ೧೯೩೪) | ನಂ. ೧೦೮೧ |
|---|---|---|

***KARNATAKA LEGISLATIVE ASSEMBLY SECRETARIAT***

***NOTIFICATION***

***No. KLA/LGA/41/Bill/2012, Bangalore, Dated: 10.12.2012***

The following Bill was introduced in Legislative Assembly on 10.12.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನೈದನೇ ಅಧಿವೇಶನ**

**ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ (ಪಕ್ಷಾಂತರ ನಿಷೇಧ) (ತಿದ್ದುಪಡಿ) ವಿಧೇಯಕ, 2012**

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 41)**

ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ (ಪಕ್ಷಾಂತರ ನಿಷೇಧ) ಅಧಿನಿಯಮ, 1987ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ (ಪಕ್ಷಾಂತರ ನಿಷೇಧ) ಅಧಿನಿಯಮ, 1987ನ್ನು (1987ರ ಕರ್ನಾಟಕ ಅಧಿನಿಯಮ 20) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ (ಪಕ್ಷಾಂತರ ನಿಷೇಧ) (ತಿದ್ದುಪಡಿ) ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 4ನೇ ಪ್ರಕರಣದ ತಿದ್ದುಪಡಿ.**– ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ (ಪಕ್ಷಾಂತರ ನಿಷೇಧ) ಅಧಿನಿಯಮ, 1987ರಲ್ಲಿ (1987ರ ಕರ್ನಾಟಕ ಅಧಿನಿಯಮ 20) 4ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ, "ಮೂವತ್ತು ದಿನಗಳೊಳಗಾಗಿ" ಎಂಬ ಪದಗಳಿಗೆ "ಅರವತ್ತು ದಿನಗಳೊಳಗಾಗಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ (ಪಕ್ಷಾಂತರ ನಿಷೇಧ) ಅಧಿನಿಯಮ, 1987 ಸದರಿ ಅಧಿನಿಯಮವನ್ನು 4ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯವರು ಒಂದು ದೂರನ್ನು ಉಲ್ಲೇಖಿಸಿರುವಲ್ಲಿ, ಪಕ್ಷಾಂತರದ ಕಾರಣದ ಮೇಲೆ,

ಅನರ್ಹತೆಯ ಪ್ರಶ್ನೆಯ ಮೇಲೆ ತೀರ್ಮಾನವನ್ನು ಕೈಗೊಳ್ಳಲು ಮಿತಿಯ ವಿಸ್ತರಣೆಗೆ ಉಪಬಂಧ ಕಲ್ಪಿಸಲು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

ಕೆ. ಎಸ್. ಈಶ್ವರಪ್ಪ
**ಉಪ ಮುಖ್ಯಮಂತ್ರಿ**

ಪಿ. ಓಂಪ್ರಕಾಶ
**ಕಾರ್ಯದರ್ಶಿ**
**ಕರ್ನಾಟಕ ವಿಧಾನಸಭೆ**

**ಅನುಬಂಧ**

**ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ (ಪಕ್ಷಾಂತರ ನಿಷೇಧ) ಅಧಿನಿಯಮ, 1987ರ (1987ರ ಕರ್ನಾಟಕ ಅಧಿನಿಯಮ 20) ಉದ್ಧೃತ ಭಾಗ**

*xx* *xx* *xx*

**4. ಪಕ್ಷಾಂತರದ ಆಧಾರದ ಮೆಲೆ ಅನರ್ಹತೆಗೆ ಸಂಬಂಧಪಟ್ಟ ಪ್ರಶ್ನೆಯ ಬಗ್ಗೆ ತೀರ್ಮಾನ.-**

*xx* *xx* *xx*

**(2) ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರದ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು (1)ನೇ ಉಪ-ಪ್ರಕರಣದ ಅಡಿಯಲ್ಲಿ ಒಂದು ದೂರನ್ನು ಸ್ವೀಕರಿಸಿರುವಲ್ಲಿ, ಅಂಥ ದೂರನ್ನು ಸ್ವೀಕರಿಸಲಾದ ಇಪ್ಪತ್ತನಾಲ್ಕು ಗಂಟೆಗಳೊಳಗಾಗಿ, ಅದನ್ನು, ತೀರ್ಮಾನಕ್ಕಾಗಿ,-**

(i) ಜಿಲ್ಲಾ ಪಂಚಾಯಿತಿಯ ಸಂದರ್ಭದಲ್ಲಿ, ರಾಜ್ಯ ಚುನಾವಣಾ ಕಮೀಷನರಿಗೆ

(ii) ಮುನಿಸಿಪಲ್ ಕಾರ್ಪೋರೇಷನ್ನಿನ ಸಂದರ್ಭದಲ್ಲಿ, ಪ್ರಾದೇಶಿಕ ಕಮೀಷನರಿಗೆ;

(iii) ನಗರ ಅಥವಾ ಪಟ್ಟಣ ಮುನಿಸಿಪಲ್ ಕೌನ್ಸಿಲ್ಲಿನ ಅಥವಾ ಟೌನ್ ಪಂಚಾಯಿತಿಯ ಸಂದರ್ಭದಲ್ಲಿ, ಡೆಪ್ಯುಟಿ ಕಮೀಷನರಿಗೆ;

(iv) ತಾಲ್ಲೂಕು ಪಂಚಾಯಿತಿಯ ಸಂದರ್ಭದಲ್ಲಿ, ರಾಜ್ಯ ಚುನಾವಣಾ ಕಮೀಷನರಿಗೆ

- ಕಳುಹಿಸತಕ್ಕದ್ದು ಮತ್ತು ಕಳುಹಿಸಲಾದುದನ್ನು ಸ್ವೀಕರಿಸಿದ ಮೂವತ್ತು ದಿನಗಳೊಳಗಾಗಿ ಪ್ರಶ್ನೆಯನ್ನು ಅವರು ತೀರ್ಮಾನಿಸತಕ್ಕದ್ದು ಮತ್ತು ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

*xx* *xx* *xx*

***KARNATAKA LEGISLATIVE ASSEMBLY***

***THIRTEENTH LEGISLATIVE ASSEMBLY***

***FIFTEENTH SESSION***

***THE KARNATAKA LOCAL AUTHORITIES (PROHIBITION OF DEFECTION) (AMENDMENT) BILL, 2012***

***(L.A. Bill No. 41 of 2012)***

A Bill further to amend the Karnataka Local Authorities (Prohibition of Defection) Act, 1987.

Whereas it is expedient further to amend the Karnataka Local Authorities (Prohibition of Defection) Act, 1987 (Karnataka Act 20 of 1987) for the purposes hereinafter appearing;

Be it enacted by the Karnataka State Legislature in the sixty third year of the Republic of India as follows:-

***1. Short title and commencement.-*** (1) This Act may be called the Karnataka Local Authorities (Prohibition of Defection) (Amendment) Act, 2012.

(2) It shall come into force at once.

***2. Amendment of section 4.-*** In the Karnataka Local Authorities (Prohibition of Defection) Act, 1987 (Karnataka Act 20 of 1987), in section 4, in sub-section (2), for the words "thirty days", the words "Sixty days" shall be substituted.

## *STATEMENT OF OBJECTS AND REASONS*

It is considered necessary to amend the Karnataka Local Authorities (Prohibition of Defection) Act, 1987 to provide for extension of the time limit for decision on the question of disqualification, on the ground of defection, where a complaint is referred by the Chief Executive Officer under sub-section (2) of section 4 of the said Act.

Hence the Bill.

## *FINANCIAL MEMORANDUM*

There is no extra expenditure involved in the proposed Legislative measure.

***K.S. ESHWARAPPA***
Deputy Chief Minister

***P. OMPRAKASHA***
Secretary
Karnataka Legislative Assembly

## *ANNEXURE*

***Extract from the Karnataka Local Authorities (Prohibition of defection) Act, 1987(Karnataka Act 20 of 1987)***

***XX*** ***XX*** ***XX***

***4. Decision on the question as to disqualification on the ground of defection.-***

***XX*** ***XX*** ***XX***

(2) Where a complaint under sub-section (1) is received by the Chief Executive Officer of the concerned local authority, he shall, within twenty-four hours from the receipt of such complaint, refer the same for decision to,-

(i) in the case of Zilla Panchayat, to the State Election Commissioner";

(ii) in the case of Municipal Corporation, to the Regional Commissioner;

(iii) in the case of a City or Town Municipal Council, or Town Panchayat, to the Deputy Commissioner ;

(iv) in the case of a Taluk Panchayat, to the State Election Commissioner.;

who shall decide the question within thirty days after the receipt by him of the reference and his decision shall be final.

***XX*** ***XX*** ***XX***

***P. OMPRAKASHA***
Secretary
Karnataka Legislative Assembly

ವಿಶೇಷ ಪತ್ರಿಕೆ

| ಭಾಗ – *IV-A* | ಬೆಂಗಳೂರು, ಸೋಮವಾರ, ಡಿಸೆಂಬರ್ ೧೦, ೨೦೧೨ (ಮಾರ್ಗಶಿರ ೧೯, ಶಕ ವರ್ಷ ೧೯೩೪) | ನಂ. ೧೦೮೨ |
|---|---|---|

***KARNATAKA LEGISLATIVE ASSEMBLY SECRETARIAT***

***NOTIFICATION***

***No. KLA/LGA/39/Bill/2012, Bangalore, Dated: 10.12.2012***

The following Bill was introduced in Legislative Assembly on 10.12.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನೈದನೇ ಅಧಿವೇಶನ**

## ಕರ್ನಾಟಕ ರಾಜ್ಯ ಸಫಾಯಿ ಕರ್ಮಚಾರಿಗಳ ಆಯೋಗ ವಿಧೇಯಕ, 2012

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 39)**

ಕರ್ನಾಟಕ ರಾಜ್ಯ ಸಫಾಯಿ ಕರ್ಮಚಾರಿಗಳ ಆಯೋಗವನ್ನು ರಚಿಸಲು ಒಂದು ವಿಧೇಯಕ.

ಸಫಾಯಿ ಕರ್ಮಚಾರಿಗಳಿಗಾಗಿ ಆಯೋಗವನ್ನು ರಚಿಸುವುದು ಮತ್ತು ಅದಕ್ಕೆ ಸಂಬಂಧಿಸಿದ ಮತ್ತು ಅದಕ್ಕೆ ಆನುಷಂಗಿಕವಾದ ವಿಷಯಗಳಿಗಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ಮೂರನೆಯ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**ಅಧ್ಯಾಯ – *I***

**ಪ್ರಾರಂಭಿಕ**

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**- (1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ಸಫಾಯಿ ಕರ್ಮಚಾರಿಗಳ ಆಯೋಗ ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**- ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(1) **"ಅಧ್ಯಕ್ಷ"** ಎಂದರೆ, ಕರ್ನಾಟಕ ರಾಜ್ಯ ಸಫಾಯಿ ಕರ್ಮಚಾರಿಗಳ ಆಯೋಗದ ಅಧ್ಯಕ್ಷರು;

(2) "ಆಯೋಗ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ಕರ್ನಾಟಕ ರಾಜ್ಯ ಸಫಾಯಿ ಕರ್ಮಚಾರಿಗಳ ಆಯೋಗ;

(3) "ಸದಸ್ಯ" ಎಂದರೆ, ಆಯೋಗದ ಒಬ್ಬ ಸದಸ್ಯ.

(4) **"ನಿಯಮಿಸಲಾದುದು"** ಎಂದರೆ, ಈ ಅಧಿನಿಯಮದಡಿಯಲ್ಲಿ ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು.

(5) **"ಸಫಾಯಿ ಕರ್ಮಚಾರಿ"** ಎಂದರೆ, ದೈಹಿಕವಾಗಿ ಮನುಷ್ಯನ ಮಲವನ್ನು ಹೊರುವ ಕಾರ್ಯದಲ್ಲಿ ಅಥವಾ ಯಾವುದೇ ನೈರ್ಮಲ್ಯ ಕಾರ್ಯದಲ್ಲಿ ನಿರತನಾಗಿರುವ ಅಥವಾ ನಿಯೋಜನೆಗೊಂಡಿರುವ ಒಬ್ಬ ವ್ಯಕ್ತಿ;

**ಅಧ್ಯಾಯ – *II***

**ರಾಜ್ಯ ಸಫಾಯಿ ಕರ್ಮಚಾರಿಗಳ ಆಯೋಗ**

**3. ಆಯೋಗದ ರಚನೆ.**- (1) ರಾಜ್ಯ ಸರ್ಕಾರವು, ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಈ ಅಧಿನಿಯಮದ ಅಡಿಯಲ್ಲಿ ತನಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಮತ್ತು ವಹಿಸಿದ ಪ್ರಕಾರ್ಯಗಳನ್ನು ನಿರ್ವಹಿಸಲು ಈ ಮುಂದಿನ ಸದಸ್ಯರುಗಳನ್ನು ಹೊಂದಿರುವ 'ಕರ್ನಾಟಕ ರಾಜ್ಯ ಸಫಾಯಿ ಕರ್ಮಚಾರಿಗಳ ಆಯೋಗ' ಎಂದು ಕರೆಯಲಾಗುವ ಆಯೋಗವನ್ನು ರಚಿಸತಕ್ಕದ್ದು, ಎಂದರೆ,-

(i) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ, ಸಾಮಾಜಿಕ-ಆರ್ಥಿಕ ಅಭಿವೃದ್ಧಿ ಮತ್ತು ಸಫಾಯಿ ಕರ್ಮಚಾರಿಗಳ ಕಲ್ಯಾಣಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಜ್ಞಾನವನ್ನುಳ್ಳ ಮತ್ತು ಅವುಗಳೊಂದಿಗೆ ಸಹವರ್ತಿಯಾಗಿರುವಂಥ ತನ್ನಿಂದ ನಾಮನಿರ್ದೇಶಿತನಾದ ಒಬ್ಬ ವ್ಯಕ್ತಿಯು ಅಧ್ಯಕ್ಷನಾಗಿರತಕ್ಕದ್ದು.

(ii) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ, ಸಾಮಾಜಿಕ–ಆರ್ಥಿಕ ಅಭಿವೃದ್ಧಿ ಮತ್ತು ಸಫಾಯಿ ಕರ್ಮಚಾರಿಗಳ ಕಲ್ಯಾಣಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಜ್ಞಾನವನ್ನುಳ್ಳ ಮತ್ತು ಅವುಗಳೊಂದಿಗೆ ಸಹವರ್ತಿಯಾಗಿರುವ ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ ಇಬ್ಬರು ಸದಸ್ಯರು, ಇವರುಗಳ ಪೈಕಿ ಒಬ್ಬರು ಮಹಿಳೆಯಾಗಿರತಕ್ಕದ್ದು.

(2) ಆಯೋಗದ ಕೇಂದ್ರ ಕಾರ್ಯಸ್ಥಾನವು ಬೆಂಗಳೂರಿನಲ್ಲಿ ಇರತಕ್ಕದ್ದು.

**4. ಅಧ್ಯಕ್ಷ ಮತ್ತು ಸದಸ್ಯರ ಪದಾವಧಿ ಮತ್ತು ಸೇವಾ ಷರತ್ತುಗಳು.–** (1) ರಾಜ್ಯ ಸರ್ಕಾರದ ಇಚ್ಛೆಗೊಳಪಟ್ಟು ಅಧ್ಯಕ್ಷ ಮತ್ತು ಪ್ರತಿಯೊಬ್ಬ ಸದಸ್ಯನು ಈ ಸಂಬಂಧದಲ್ಲಿ ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂತೆ ಮೂರು ವರ್ಷಗಳನ್ನು ಮೀರದ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು.

(2) ಅಧ್ಯಕ್ಷ ಅಥವಾ ಸದಸ್ಯನು ತನ್ನ ಸಹಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಪತ್ರ ಬರೆಯುವ ಮೂಲಕ ಯಾವುದೇ ಸಮಯದಲ್ಲಿ ಸೂಚನೆಯನ್ನು ನೀಡಿ ಅಧ್ಯಕ್ಷ ಅಥವಾ ಸಂದರ್ಭಾನುಸಾರವಾಗಿ ಸದಸ್ಯನ ಸ್ಥಾನಕ್ಕೆ ರಾಜೀನಾಮೆಯನ್ನು ನೀಡಬಹುದು.

(3) ಅಧ್ಯಕ್ಷ ಅಥವಾ ಯಾವೊಬ್ಬ ಸದಸ್ಯನು ಈ ಮುಂದಿನವುಗಳಿಗೊಳಗಾಗಿದ್ದರೆ ರಾಜ್ಯ ಸರ್ಕಾರವು ಆದೇಶದ ಮೂಲಕ ಅವನನ್ನು ಅಧ್ಯಕ್ಷನ ಅಥವಾ ಸಂದರ್ಭಾನುಸಾರವಾಗಿ ಸದಸ್ಯನ ಸ್ಥಾನದಿಂದ ತೆಗೆದುಹಾಕತಕ್ಕದ್ದು:–

(ಎ) ಅವಿಮುಕ್ತ ದಿವಾಳಿಯಾದರೆ; ಅಥವಾ

(ಬಿ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣಿತನಾಗಿದ್ದು ಕಾರಾವಾಸದ ಶಿಕ್ಷೆಗೆ ಒಳಗಾಗಿದ್ದರೆ; ಅಥವಾ

(ಸಿ) ಅಸ್ವಸ್ಥ ಚಿತ್ತದವನಾಗಿದ್ದರೆ ಮತ್ತು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿಸಲಾಗಿದ್ದರೆ; ಅಥವಾ

(ಡಿ) ಕಾರ್ಯನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯನಿರ್ವಹಿಸಲು ಅಸಮರ್ಥನಾದರೆ; ಅಥವಾ

(ಇ) ಆಯೋಗದಿಂದ ಗೈರು ಹಾಜರಾಗುವುದಕ್ಕೆ ಅನುಮತಿಯನ್ನು ಪಡೆದುಕೊಳ್ಳದೆ ಆಯೋಗದ ನಿರಂತರ ಮೂರು ಸಭೆಗಳಿಗೆ ಗೈರು ಹಾಜರಾದರೆ, ಅಥವಾ

(ಎಫ್) ಅವನು ಪದದಲ್ಲಿ ಮುಂದುವರಿಯುವುದರಿಂದ ಸಫಾಯಿ ಕರ್ಮಚಾರಿಗಳು ಅಥವಾ ಸಾರ್ವಜನಿಕ ಹಿತಾಸಕ್ತಿಗೆ ಬಾಧಕವಾಗುವ ರೀತಿಯಲ್ಲಿ ತನ್ನ ಅಧ್ಯಕ್ಷ ಅಥವಾ ಸದಸ್ಯನ ಸ್ಥಾನವನ್ನು ದುರುಪಯೋಗಪಡಿಸಿಕೊಳ್ಳುವನೆಂದು ರಾಜ್ಯ ಸರ್ಕಾರವು ಅಭಿಪ್ರಾಯ ಪಟ್ಟರೆ:

ಪರಂತು, ಈ ಖಂಡದ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಗೆ, ಪ್ರಸ್ತಾವದ ವಿರುದ್ಧ ಅಹವಾಲು ಹೇಳಿಕೊಳ್ಳಲು ಸೂಕ್ತ ಅವಕಾಶಕೊಟ್ಟ ಹೊರತು, ಅವನನ್ನು ತೆಗೆದುಹಾಕತಕ್ಕದ್ದಲ್ಲ.

(4) (2)ನೇ ಉಪಪ್ರಕರಣದಡಿಯಲ್ಲಿ ಅಥವಾ ಅನ್ಯಥಾ ಖಾಲಿ ಸ್ಥಾನ ಉಂಟಾದಲ್ಲಿ ಅದನ್ನು ಹೊಸದಾಗಿ ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡುವ ಮೂಲಕ ತುಂಬತಕ್ಕದ್ದು.

(5) ಅಧ್ಯಕ್ಷರಿಗೆ ಮತ್ತು ಸದಸ್ಯರಿಗೆ ಸಂದಾಯ ಮಾಡಬಹುದಾದ ವೇತನಗಳು ಮತ್ತು ಭತ್ಯೆಗಳು ಹಾಗೂ ಇತರ ಸೇವಾ ಷರತ್ತುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

**5. ಆಯೋಗದ ಸಿಬ್ಬಂದಿ.–** ರಾಜ್ಯ ಸರ್ಕಾರವು, ಈ ಅಧಿನಿಯಮದಡಿಯಲ್ಲಿ ಆಯೋಗದ ಸೂಕ್ತ ಕಾರ್ಯನಿರ್ವಹಣೆಗೆ ಅಗತ್ಯವಾಗಬಹುದಾದಂತೆ ಸರ್ಕಾರಿ ನೌಕರರಾಗಿರುವಂಥ ಅಧಿಕಾರಿಗಳು ಮತ್ತು ಉದ್ಯೋಗಿಗಳನ್ನು ಆಯೋಗಕ್ಕೆ ಒದಗಿಸತಕ್ಕದ್ದು. ಆಯೋಗದ ಅಧಿಕಾರಿಗಳು ಮತ್ತು ಉದ್ಯೋಗಿಗಳ ಸಂಖ್ಯಾಬಲ ಹಾಗೂ ನಿಬಂಧನೆಗಳು ಮತ್ತು ಷರತ್ತುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

**6. ಖಾಲಿಸ್ಥಾನ ಇತ್ಯಾದಿಗಳು ಆಯೋಗದ ವ್ಯವಹರಣೆಗಳನ್ನು ಅನೂರ್ಜಿತಗೊಳಿಸತಕ್ಕದ್ದಲ್ಲ.–** ಆಯೋಗದ ಯಾವುದೇ ಕೃತ್ಯ ಅಥವಾ ವ್ಯವಹರಣೆಗಳನ್ನು, ಆಯೋಗದಲ್ಲಿನ ಖಾಲಿ ಸ್ಥಾನ ಅಥವಾ ಅದರ ರಚನೆಯಲ್ಲಿನ ಯಾವುದೇ ನ್ಯೂನ್ಯತೆಯ ಕಾರಣಮಾತ್ರದಿಂದಲೇ ಪ್ರಶ್ನಿಸತಕ್ಕದ್ದಲ್ಲ ಅಥವಾ ಅನೂರ್ಜಿತಗೊಳಿಸತಕ್ಕದ್ದಲ್ಲ.

**7. ಆಯೋಗವು ನಿಯಂತ್ರಿಸಬೇಕಾದ ಕಾರ್ಯವಿಧಾನ.–** (1) ಅಧ್ಯಕ್ಷರು ಸೂಕ್ತವೆಂದು ಭಾವಿಸುವಂಥ ಸಮಯದಲ್ಲಿ ಮತ್ತು ಸ್ಥಳಗಳಲ್ಲಿ ಆಯೋಗವು ಸಭೆ ಸೇರತಕ್ಕದ್ದು.

(2) ಈ ಅಧಿನಿಯಮದ ಮತ್ತು ಅದರಡಿಯಲ್ಲಿ ರಚಿಸಿದ ನಿಯಮಗಳ ಉಪಬಂಧಗಳಿಗೆ ಒಳಪಟ್ಟು, ಆಯೋಗವು ಅದರ ಕಾರ್ಯವಿಧಾನವನ್ನು ನಿಯಂತ್ರಿಸುವ ಅಧಿಕಾರವನ್ನು ಹೊಂದಿರತಕ್ಕದ್ದು.

(3) ಆಯೋಗದ ಎಲ್ಲ ಆದೇಶಗಳು ಮತ್ತು ತೀರ್ಮಾನಗಳನ್ನು ಅಧ್ಯಕ್ಷ ಅಥವಾ ಈ ಸಂಬಂಧದಲ್ಲಿ ಅಧ್ಯಕ್ಷನು ಸೂಕ್ತವಾಗಿ ಪ್ರಾಧಿಕರಿಸಿದ ಆಯೋಗದ ಇತರ ಯಾವೊಬ್ಬ ಅಧಿಕಾರಿಯು ಅಧಿಕೃತಗೊಳಿಸತಕ್ಕದ್ದು.

## ಅಧ್ಯಾಯ – *III*

## ಆಯೋಗದ ಪ್ರಕಾರ್ಯಗಳು ಮತ್ತು ಅಧಿಕಾರಗಳು

**8. ಆಯೋಗದ ಪ್ರಕಾರ್ಯಗಳು.**– (1) ಆಯೋಗವು ಈ ಮುಂದಿನ ಎಲ್ಲಾ ಅಥವಾ ಯಾವುವೇ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ:–

(ಎ) ಕಾಲ–ಮಿತಿ ಕ್ರಿಯಾ ಯೋಜನೆಯಡಿಯಲ್ಲಿ ಸಫಾಯಿ ಕರ್ಮಚಾರಿಗಳಿಗೆ ನೀಡಿರುವ ಸ್ಥಾನಮಾನ, ಸೌಲಭ್ಯಗಳು ಮತ್ತು ಅವಕಾಶಗಳಲ್ಲಿನ ಅಸಮಾನತೆಯನ್ನು ನಿರ್ಮೂಲನ ಮಾಡುವುದಕ್ಕೆ ಸಂಬಂಧಿಸಿದಂತೆ ಕೈಗೊಳ್ಳಬೇಕಾದ ನಿರ್ದಿಷ್ಟ ಕಾರ್ಯಕ್ರಮಗಳನ್ನು ರಾಜ್ಯ ಸರ್ಕಾರಕ್ಕೆ ಶಿಫಾರಸ್ಸು ಮಾಡುವುದು;

(ಬಿ) ಸಫಾಯಿ ಕರ್ಮಚಾರಿಗಳ ಸಾಮಾಜಿಕ ಮತ್ತು ಆರ್ಥಿಕ ಪುನರ್ವಸತಿಗೆ ಸಂಬಂಧಿಸಿದ ಕಾರ್ಯಕ್ರಮಗಳು ಮತ್ತು ಯೋಜನೆಗಳ ಅನುಷ್ಠಾನವನ್ನು ಅಧ್ಯಯನ ಮಾಡುವುದು ಮತ್ತು ಮೌಲ್ಯಮಾಪನ ಮಾಡುವುದು ಹಾಗೂ ಅಂಥ ಕಾರ್ಯಕ್ರಮಗಳ ಮತ್ತು ಯೋಜನೆಗಳ ಸಮನ್ವಯ ಮತ್ತು ಅನುಷ್ಠಾನಕ್ಕೆ ಸಂಬಂಧಿಸಿದಂತೆ ರಾಜ್ಯ ಸರ್ಕಾರಕ್ಕೆ ಶಿಫಾರಸ್ಸುಗಳನ್ನು ಮಾಡುವುದು;

(ಸಿ) ನಿರ್ದಿಷ್ಟ ಕುಂದು ಕೊರತೆಗಳನ್ನು ವಿಚಾರಿಸುವುದು ಮತ್ತು ಈ ಮುಂದಿನ ಎಂದರೆ,–

(i) ಸಫಾಯಿ ಕರ್ಮಚಾರಿಗಳ ಯಾವುದೇ ವರ್ಗಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳು ಅಥವಾ ಯೋಜನೆಗಳು;

(ii) ಸಫಾಯಿ ಕರ್ಮಚಾರಿಗಳ ತೊಂದರೆಗಳನ್ನು ಶಮನಗೊಳಿಸುವ ಉದ್ದೇಶವನ್ನು ಹೊಂದಿರುವ ತೀರ್ಮಾನಗಳು, ಮಾರ್ಗದರ್ಶನಗಳು ಅಥವಾ ಸೂಚನೆಗಳು;

(iii) ಸಫಾಯಿ ಕರ್ಮಚಾರಿಗಳ ಸಾಮಾಜಿಕ ಮತ್ತು ಆರ್ಥಿಕ ಏಳಿಗೆಗಾಗಿನ ಕ್ರಮಗಳು;

(iv) ಸಫಾಯಿ ಕರ್ಮಚಾರಿಗಳಿಗೆ ಯಾವುದೇ ಕಾನೂನಿನ ಉಪಬಂಧಗಳನ್ನು ಅನ್ವಯಿಸುವಲ್ಲಿ ಮತ್ತು ಸಂಬಂಧಪಟ್ಟ ಪ್ರಾಧಿಕಾರಗಳೊಂದಿಗೆ ಚರ್ಚಿಸಿ ಅಂಥ ವಿಷಯಗಳ ಬಗ್ಗೆ ಕ್ರಮ ಕೈಗೊಳ್ಳುವುದು,

– ಇವುಗಳನ್ನು ಅನುಷ್ಠಾನಕ್ಕೆ ತರದಿರುವ ವಿಷಯಗಳಿಗೆ ಸಂಬಂಧಿಸಿದ ಅಂಶಗಳನ್ನು ಗಮನಿಸುವುದು;

(ಡಿ) ಸಫಾಯಿ ಕರ್ಮಚಾರಿಗಳು ಎದುರಿಸುತ್ತಿರುವ ತೊಂದರೆಗಳು ಮತ್ತು ಕುಂದುಕೊರತೆಗಳನ್ನು ಪರಿಗಣಿಸಿ, ಸಫಾಯಿ ಕರ್ಮಚಾರಿಗಳಿಗೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ರಾಜ್ಯ ಸರ್ಕಾರಕ್ಕೆ ನಿಯಯಕಾಲಿಕ ವರದಿಗಳನ್ನು ಸಲ್ಲಿಸುವುದು;

(ಇ) ರಾಜ್ಯ ಸರ್ಕಾರವು ತನಗೆ ಕಳುಹಿಸಬಹುದಾದ ಯಾವುದೇ ಇತರ ವಿಷಯ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ, ಆಯೋಗವು, ರಾಜ್ಯ ಸರ್ಕಾರದ ಇಲಾಖೆಗಳು ಮತ್ತು ಅದರ ಏಜೆನ್ಸಿಗಳು/ನಿಗಮಗಳು ಮತ್ತು ಸ್ಥಳೀಯ ಸಂಸ್ಥೆಗಳಿಂದ, ಆ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿಯನ್ನು ತರಿಸಿಕೊಳ್ಳಲು ಅಧಿಕಾರವನ್ನು ಹೊಂದಿರತಕ್ಕದ್ದು.

**9. ಆಯೋಗದ ಅಧಿಕಾರಗಳು.**– ಆಯೋಗವು, 8ನೇ ಪ್ರಕರಣದ ಅಡಿಯಲ್ಲಿ ಯಾವುದೇ ವಿಷಯವನ್ನು ತನಿಖೆ ಮಾಡುವಾಗ/ವಿಚಾರಣೆ ಮಾಡುವಾಗ ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ ಅಡಿಯಲ್ಲಿ ಮತ್ತು ವಿಶೇಷವಾಗಿ ಈ ಮುಂದಿನ ವಿಷಯಗಳಿಗೆ ಸಂಬಂಧಪಟ್ಟಂತೆ ಒಂದು ದಾವೆಯನ್ನು ವಿಚಾರಣೆ ಮಾಡುವಾಗ ಸಿವಿಲ್ ನ್ಯಾಯಾಲಯವು ಹೊಂದಿರುವ ಎಲ್ಲ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ರಾಜ್ಯದ ಯಾವುದೇ ಭಾಗದಿಂದ ಯಾವೊಬ್ಬ ವ್ಯಕ್ತಿಯನ್ನು ಸಮನು ಮಾಡುವುದು ಮತ್ತು ಅವನ ಹಾಜರಾತಿಯನ್ನು ಒತ್ತಾಯಪಡಿಸುವುದು ಮತ್ತು ಪ್ರಮಾಣ ಮಾಡಿಸುವ ಮೂಲಕ ಅವನನ್ನು ಪರೀಕ್ಷಿಸುವುದು;

(ii) ಯಾವುವೇ ದಾಖಲೆಗಳನ್ನು ಮತ್ತು ಸಾಕ್ಷಿಗಳನ್ನು ಶೋಧಿಸುವುದನ್ನು ಮತ್ತು ಹಾಜರುಪಡಿಸುವುದನ್ನು ಅಗತ್ಯಪಡಿಸುವುದು;

(iii) ಅಫಿಡಾವಿಟ್‌ಗಳ ಮೂಲಕ ಯಾವುದೇ ಸಾಕ್ಷ್ಯವನ್ನು ಸ್ವೀಕರಿಸುವುದು;

(iv) ಯಾವುದೇ ನ್ಯಾಯಾಲಯ ಅಥವಾ ಕಛೇರಿಯಿಂದ ಯಾವುದೇ ಸಾರ್ವಜನಿಕ ದಾಖಲೆ ಅಥವಾ ಅದರ ಪ್ರತಿಯನ್ನು ನೀಡುವಂತೆ ಅಗತ್ಯಪಡಿಸುವುದು;

(v) ನಿಯಮಿಸಬಹುದಾದಂಥ ಇತರ ಯಾವುದೇ ವಿಷಯ.

## ಅಧ್ಯಾಯ – *IV*

## ಹಣಕಾಸು, ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ

**10. ರಾಜ್ಯ ಸರ್ಕಾರದಿಂದ ಅನುದಾನಗಳು.**– ಈ ಅಧಿನಿಯಮದ ಉದ್ದೇಶಗಳಿಗಾಗಿ ಬಳಸಲು, ರಾಜ್ಯ ಸರ್ಕಾರವು ಯುಕ್ತವೆಂದು ಭಾವಿಸುವಂಥ ಹಣದ ಮೊತ್ತವನ್ನು ಅನುದಾನಗಳ ಮೂಲಕ ಆಯೋಗಕ್ಕೆ ಈ ಪರವಾಗಿ ಕಾನೂನಿನ ಮೂಲಕ ರಾಜ್ಯ ವಿಧಾನಮಂಡಲವು ಧನವಿನಿಯೋಗ ಮಾಡಿದ ನಂತರ ನೀಡತಕ್ಕದ್ದು.

(2) ಆಯೋಗವು ಅಂಥ ಮೊತ್ತವನ್ನು ಈ ಅಧಿನಿಯಮದ ಅಡಿಯಲ್ಲಿನ ಪ್ರಕಾರ್ಯಗಳನ್ನು ನೆರವೇರಿಸಲು ತಾನು ಸೂಕ್ತವೆಂದು ಭಾವಿಸುವ ರೀತಿಯಲ್ಲಿ ಅನುದಾನಗಳಿಂದ ಖರ್ಚು ಮಾಡಬಹುದು ಮತ್ತು ಅಂಥ ಮೊತ್ತಗಳನ್ನು (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸುವ ಅನುದಾನಗಳಿಂದ ಸಂದಾಯ ಮಾಡಬಹುದಾದ ವೆಚ್ಚವೆಂದು ಪರಿಗಣಿಸತಕ್ಕದ್ದು.

**11. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ಆಯೋಗದ ಆದಾಯ ಮತ್ತು ವೆಚ್ಚಗಳನ್ನು ನಿಯಮಿಸಬಹುದಾದಂಥ ನಿಯಮಗಳಿಗನುಸಾರವಾಗಿ ಇಡತಕ್ಕದ್ದು.

(2) ನಿಯಮಿಸಬಹುದಾದಂಥ ನಮೂನೆಯಲ್ಲಿ ಲೆಕ್ಕಪತ್ರಗಳ ವಾರ್ಷಿಕ ವಿವರವನ್ನು ಆಯೋಗವು ತಯಾರಿಸತಕ್ಕದ್ದು.

(3) ಆಯೋಗದ ಲೆಕ್ಕಪತ್ರಗಳನ್ನು ರಾಜ್ಯ ಸರ್ಕಾರವು ನೇಮಕ ಮಾಡಬಹುದಾದಂಥ ಲೆಕ್ಕ ಪರಿಶೋಧಕನಿಂದ ವಾರ್ಷಿಕವಾಗಿ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.

(4) ಲೆಕ್ಕ ಪರಿಶೋಧನೆಯ ಉದ್ದೇಶಕ್ಕಾಗಿ ಆಯೋಗದ ಎಲ್ಲ ಲೆಕ್ಕಪತ್ರಗಳನ್ನು ಮತ್ತು ಇತರ ದಾಖಲೆಗಳನ್ನು ಪಡೆಯಲು ಲೆಕ್ಕ ಪರಿಶೋಧಕನಿಗೆ ಅವಕಾಶವಿರತಕ್ಕದ್ದು.

(5) ಲೆಕ್ಕ ಪರಿಶೋಧನೆಯ ಅಂಥ ವೆಚ್ಚಗಳನ್ನು ನಿಯಮಿಸಬಹುದಾದಂತೆ ಅನುದಾನದಿಂದ ಸಂದಾಯ ಮಾಡತಕ್ಕದ್ದು.

(6) ಲೆಕ್ಕ ಪರಿಶೋಧಕರಿಂದ ವರದಿಯನ್ನು ಸ್ವೀಕರಿಸಿದ ತರುವಾಯ ಆದಷ್ಟು ಬೇಗನೆ ಆಯೋಗವು ಲೆಕ್ಕಪತ್ರಗಳ ವಾರ್ಷಿಕ ವಿವರವನ್ನು ಲೆಕ್ಕ ಪರಿಶೋಧಕನ ವರದಿಯ ಪ್ರತಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ನಿಯಮಿಸಬಹುದಾದ ಅಂಥ ರೀತಿಯಲ್ಲಿ ಲೆಕ್ಕಪತ್ರಗಳ ವಾರ್ಷಿಕ ವಿವರವನ್ನು ಪ್ರಕಟಿಸುವಂತೆ ಮಾಡತಕ್ಕದ್ದು.

(7) ರಾಜ್ಯ ಸರ್ಕಾರವು ಲೆಕ್ಕ ಪರಿಶೋಧನಾ ವರದಿಯನ್ನು ಸ್ವೀಕರಿಸಿದ ತರುವಾಯ, ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ವರದಿಯನ್ನು ಮಂಡಿಸಲು ಅವಶ್ಯಕ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

(8) ರಾಜ್ಯ ಸರ್ಕಾರವು ಲೆಕ್ಕ ಪರಿಶೋಧಕನ ವರದಿಯನ್ನು ಅವಗಾಹಿಸಿದ ತರುವಾಯ ಅದು ಉಚಿತವೆಂದು ಭಾವಿಸುವಂಥ ನಿರ್ದೇಶಗಳನ್ನು ಆಯೋಗಕ್ಕೆ ನೀಡಬಹುದು ಮತ್ತು ಆಯೋಗವು ಅಂಥ ನಿರ್ದೇಶಗಳನ್ನು ಪಾಲಿಸತಕ್ಕದ್ದು.

## ಅಧ್ಯಾಯ – *V*

### ಸಂಕೀರ್ಣ

**12. ಆಯೋಗದ ಅಧ್ಯಕ್ಷ, ಸದಸ್ಯರು ಮತ್ತು ಸಿಬ್ಬಂದಿಯು ಸಾರ್ವಜನಿಕ ನೌಕರರಾಗಿರತಕ್ಕದ್ದು.–** (1) ಆಯೋಗದ ಅಧ್ಯಕ್ಷ, ಪ್ರತಿಯೊಬ್ಬ ಸದಸ್ಯ ಮತ್ತು ಈ ಅಧಿನಿಯಮದ ಅಡಿಯಲ್ಲಿ ಪ್ರಕಾರ್ಯಗಳನ್ನು ನೆರವೇರಿಸಲು ಆಯೋಗವು ನೇಮಕ ಮಾಡಿದ ಅಥವಾ ಅಧಿಕೃತಗೊಳಿಸಿದ ಪ್ರತಿಯೊಬ್ಬ ಅಧಿಕಾರಿಯನ್ನು, ಭಾರತ ದಂಡಸಂಹಿತೆಯ (1860ರ ಕೇಂದ್ರ ಅಧಿನಿಯಮ 45) 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರನೆಂದು ಭಾವಿಸತಕ್ಕದ್ದು.

**13. ವಾರ್ಷಿಕ ವರದಿ.–** ಪ್ರತಿ ಹಣಕಾಸು ವರ್ಷಕ್ಕಾಗಿ ಆಯೋಗವು ಹಿಂದಿನ ವರ್ಷದಲ್ಲಿ ಅದರ ಕಾರ್ಯಚಟುವಟಿಕೆಯ ಬಗ್ಗೆ ಪೂರ್ಣ ಮಾಹಿತಿಯನ್ನು ನೀಡುವ ಅದರ ವಾರ್ಷಿಕ ವರದಿಯನ್ನು ನಿಯಮಿಸಬಹುದಾದಂತೆ ಅಂಥ ನಮೂನೆ ಮತ್ತು ಅಂಥ ಸಮಯದಲ್ಲಿ ತಯಾರಿಸತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

**14. ವಾರ್ಷಿಕ ವರದಿಯನ್ನು ರಾಜ್ಯ ವಿಧಾನಮಂಡಲದಲ್ಲಿ ಮಂಡಿಸತಕ್ಕದ್ದು.–** ರಾಜ್ಯ ಸರ್ಕಾರವು, ಆಯೋಗದ ಶಿಫಾರಸ್ಸುಗಳ ಮೇಲೆ ಕೈಗೊಂಡ ಅಥವಾ ಕೈಗೊಳ್ಳಬೇಕೆಂದು ಪ್ರಸ್ತಾವಿಸಿದ ಕ್ರಮಗಳನ್ನು ಮತ್ತು ಶಿಫಾರಸ್ಸುಗಳನ್ನು ಒಪ್ಪಿಕೊಳ್ಳದಿರುವುದಕ್ಕೆ ಕಾರಣಗಳೇನಾದರೂ ಇದ್ದಲ್ಲಿ ಅವುಗಳನ್ನು ವಿವರಿಸುವ ಜ್ಞಾಪನದೊಂದಿಗೆ ವಾರ್ಷಿಕ ವರದಿಯನ್ನು ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸತಕ್ಕದ್ದು.

**15. ಅಧಿಕಾರಗಳ ಪ್ರತ್ಯಾಯೋಜನೆ.–** ಆಯೋಗವು, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ, ತಾನು ಅವಶ್ಯಕವೆಂದು ಭಾವಿಸಬಹುದಾದಂತೆ ಈ ಅಧಿನಿಯಮದಡಿಯಲ್ಲಿನ ಅಂಥ ಅಧಿಕಾರಗಳು ಮತ್ತು ಕರ್ತವ್ಯಗಳನ್ನು, ಅದರಲ್ಲಿ ನಿರ್ದಿಷ್ಟಪಡಿಸಬಹುದಾದ ಯಾವುದೇ ಅಂಥ ಷರತ್ತುಗಳು ಮತ್ತು ಮಿತಿಗಳಿಗೆ ಒಳಪಟ್ಟು ಅಧ್ಯಕ್ಷರಿಗೆ ಅಥವಾ ಯಾವೊಬ್ಬ ಸದಸ್ಯರಿಗೆ ಅಥವಾ ಆಯೋಗದ ಯಾವೊಬ್ಬ ಅಧಿಕಾರಿಗೆ ಪ್ರತ್ಯಾಯೋಜಿಸಬಹುದು.

**16. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮದಡಿಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಬೇಕೆಂದು ಉದ್ದೇಶಿಸಿದ ಯಾವುದೇ ಕ್ರಮಕ್ಕಾಗಿ ರಾಜ್ಯ ಸರ್ಕಾರದ, ಆಯೋಗದ, ಅಧ್ಯಕ್ಷರ, ಸದಸ್ಯರ ಅಥವಾ ಆಯೋಗದ ಯಾವೊಬ್ಬ ಅಧಿಕಾರಿಗಳ ಅಥವಾ ಇತರ ಉದ್ಯೋಗಿಗಳ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡತಕ್ಕದ್ದಲ್ಲ.

**17. ನಿಯಮಗಳನ್ನು ರಚಿಸಲು ಅಧಿಕಾರ.–** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯನ್ನು ನೀಡುವ ಮೂಲಕ ಈ ಅಧಿನಿಯಮದ ಉಪಬಂಧಗಳನ್ನು ನೆರವೇರಿಸುವ ಉದ್ದೇಶಗಳಿಗಾಗಿ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಮೇಲೆ ತಿಳಿಸಿದ ಅಧಿಕಾರಗಳ ಸಾಮಾನ್ಯಾನ್ವಯಕ್ಕೆ ಪ್ರತಿಕೂಲವಾಗದಂತೆ ಅಂಥ ನಿಯಮಗಳು ಈ ಮುಂದಿನ ಎಲ್ಲ ಅಥವಾ ಯಾವುದೇ ವಿಷಯದ ಬಗ್ಗೆ ಉಪಬಂಧ ಕಲ್ಪಿಸಬಹುದು, ಎಂದರೆ:–

(i) 4ನೇ ಪ್ರಕರಣದ (5)ನೇ ಉಪಪ್ರಕರಣದ ಅಡಿಯಲ್ಲಿ ಅಧ್ಯಕ್ಷರಿಗೆ ಮತ್ತು ಸದಸ್ಯರಿಗೆ ಹಾಗೂ 5ನೇ ಪ್ರಕರಣದ ಅಡಿಯಲ್ಲಿ ಅಧಿಕಾರಿಗಳಿಗೆ ಮತ್ತು ಇತರ ಉದ್ಯೋಗಿಗಳಿಗೆ ಸಂದಾಯ ಮಾಡಬಹುದಾದ ಸಂಬಳಗಳು ಮತ್ತು ಭತ್ಯೆಗಳು ಹಾಗೂ ಅವರ ಇತರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು;

(ii) 13ನೇ ಪ್ರಕರಣದ ಅಡಿಯಲ್ಲಿ ತಯಾರಿಸತಕ್ಕ ವಾರ್ಷಿಕ ವರದಿಯ ನಮೂನೆ ಮತ್ತು ಸಮಯ;

(iii) ಅಗತ್ಯವಾದ ಅಥವಾ ಮಾಡಬೇಕಾದ ಅಥವಾ ಸಂದರ್ಭಾನುಸಾರವಾಗಿ ನಿಯಮಿಸಲಾದ ಯಾವುದೇ ಇತರ ವಿಷಯ.

(3) ಈ ಅಧಿನಿಯಮದ ಅಡಿಯಲ್ಲಿ ಮಾಡಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಒಂದು ಅಧಿವೇಶನ ಅಥವಾ ಎರಡು ಅನುಕ್ರಮ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಹೀಗೆ ಮಂಡಿಸಲಾದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು ಉಭಯ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಬೇಕೆಂದು ಒಪ್ಪಿದರೆ ಅಥವಾ ನಿಯಮವನ್ನು ಮಾಡಬಾರದೆಂದು ಉಭಯ ಸದನಗಳು ತೀರ್ಮಾನಿಸಿದರೆ ತದನಂತರ ಆ ನಿಯಮವು ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರವಾಗಿ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಈ ಮೊದಲು ಮಾಡಲಾದ ಯಾವುದರ ಮಾನ್ಯತೆಗೂ ಪ್ರತಿಕೂಲವಾಗದಂತೆ ಇರತಕ್ಕದ್ದು.

**18. ತೊಂದರೆಗಳನ್ನು ನಿವಾರಿಸಲು ಅಧಿಕಾರ.-** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದರೆ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸಲಾದ ಆದೇಶದ ಮೂಲಕ ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಂತೆ ಅಗತ್ಯವೆಂದು ಅಥವಾ ಯುಕ್ತವೆಂದು ತನಗೆ ಕಂಡುಬರುವ ಉಪಬಂಧಗಳನ್ನು ಮಾಡಬಹುದು:

ಪರಂತು, ಅಂಥ ಯಾವುದೇ ಆದೇಶವನ್ನು ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಎರಡು ವರ್ಷಗಳ ಅವಧಿ ಮುಕ್ತಾಯವಾದ ತರುವಾಯ ಮಾಡತಕ್ಕದ್ದಲ್ಲ.

(2) ಈ ಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಆದೇಶವನ್ನು ಅದನ್ನು ಹೊರಡಿಸಿದ ತರುವಾಯ ಆದಷ್ಟು ಬೇಗನೆ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಸಫಾಯಿ ಕರ್ಮಚಾರಿಗಳಿಗಾಗಿ ಈ ಕೆಳಕಂಡ ಪ್ರಕಾರ್ಯಗಳ ಸಂಬಂಧದಲ್ಲಿ ಸುಧಾರಣೆಯನ್ನು ತರುವ ಉದ್ದೇಶದಿಂದ ಕಲ್ಯಾಣ ಕ್ರಮಗಳನ್ನು ಕಲ್ಪಿಸುವುದಕ್ಕಾಗಿ ಒಂದು ರಾಜ್ಯ ಆಯೋಗವನ್ನು ಸ್ಥಾಪಿಸುವುದು, ಅಗತ್ಯವೆಂದು ಪರಿಗಣಿಸಲಾಗಿದೆ, ಎಂದರೆ:–

(1) ಸಫಾಯಿ ಕರ್ಮಚಾರಿಗಳಿಗೆ ಸ್ಥಾನಮಾನದಲ್ಲಿ, ಸೌಲಭ್ಯಗಳಲ್ಲಿ ಮತ್ತು ಅವಕಾಶಗಳಲ್ಲಿ ಇರುವ ಅಸಮಾನತೆಗಳನ್ನು ನಿವಾರಿಸುವ ಸಂಬಂಧದಲ್ಲಿ ಒಂದು ಕಾಲಬದ್ಧ ಕ್ರಿಯಾ ಯೋಜನೆಯ ಅಡಿಯಲ್ಲಿ ನಿರ್ದಿಷ್ಟ ಕ್ರಿಯಾ ಯೋಜನೆಯನ್ನು ರೂಪಿಸಲು ರಾಜ್ಯ ಸರ್ಕಾರಕ್ಕೆ ಶಿಫಾರಸ್ಸುಗಳನ್ನು ಮಾಡುವುದು;

(2) ಸಫಾಯಿ ಕರ್ಮಚಾರಿಗಳ ಸಾಮಾಜಿಕ ಮತ್ತು ಆರ್ಥಿಕ ಪುನರ್ವ್ಯವಸ್ಥೆಗೆ ಸಂಬಂಧಪಟ್ಟ ಕಾರ್ಯಕ್ರಮಗಳು ಮತ್ತು ಕಾರ್ಯ ಯೋಜನೆಗಳ ಅನುಷ್ಠಾನದ ಅಧ್ಯಯನ ಮತ್ತು ಮೌಲ್ಯಮಾಪನ ಮಾಡುವುದು ಮತ್ತು ಅಂಥ ಕಾರ್ಯಕ್ರಮಗಳು ಮತ್ತು ಕಾರ್ಯ ಯೋಜನೆಗಳ ಸಮನ್ವಯ ಮತ್ತು ಅನುಷ್ಠಾನಕ್ಕಾಗಿ ರಾಜ್ಯ ಸರ್ಕಾರಕ್ಕೆ ಶಿಫಾರಸ್ಸುಗಳನ್ನು ಮಾಡುವುದು;

(3) ನಿರ್ದಿಷ್ಟ ಕುಂದುಕೊರತೆಗಳ ಬಗ್ಗೆ ವಿಚಾರಣೆ ಮಾಡುವುದು ಮತ್ತು,–

(i) ಸಫಾಯಿ ಕರ್ಮಚಾರಿಗಳ ಯಾವುದೇ ಗುಂಪಿಗೆ ಸಂಬಂಧಪಟ್ಟಂತೆ ಕಾರ್ಯಕ್ರಮ ಅಥವಾ ಕಾರ್ಯ ಯೋಜನೆಯನ್ನು;

(ii) ಸಫಾಯಿ ಕರ್ಮಚಾರಿಗಳ ಕಷ್ಟ ಕಾರ್ಪಣ್ಯಗಳನ್ನು ಕಡಿಮೆ ಮಾಡುವ ಗುರಿ ಹೊಂದಿರುವ ತೀರ್ಮಾನಗಳನ್ನು, ಮಾರ್ಗಸೂಚಿಗಳನ್ನು ಅಥವಾ ಸೂಚನೆಗಳನ್ನು;

(iii) ಸಫಾಯಿ ಕರ್ಮಚಾರಿಗಳನ್ನು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಮೇಲೆತ್ತುವ ಕ್ರಮಗಳನ್ನು;

(iv) ಯಾವುದೇ ಕಾನೂನಿನ ಉಪಬಂಧಗಳನ್ನು ಸಫಾಯಿ ಕರ್ಮಚಾರಿಗಳಿಗೆ ಅನ್ವಯ ಮಾಡುವುದು ಮತ್ತು ಅಂಥ ವಿಷಯಗಳನ್ನು ಸಂಬಂಧಪಟ್ಟ ಪ್ರಾಧಿಕಾರಗಳ ಬಳಿಗೆ ಒಯ್ಯುವುದನ್ನು,

– ಅನುಷ್ಠಾನಗೊಳಿಸದಿರುವುದಕ್ಕೆ ಸಂಬಂಧಪಟ್ಟ ವಿಷಯಗಳನ್ನು ಗಮನಕ್ಕೆ ತೆಗೆದುಕೊಳ್ಳುವುದು;

(4) ಸಫಾಯಿ ಕರ್ಮಚಾರಿಗಳು ಎದುರಿಸುತ್ತಿರುವ ಯಾವುವೇ ತೊಂದರೆಗಳನ್ನು ಅಥವಾ ಕುಂದುಕೊರತೆಗಳನ್ನು ಗಣನೆಗೆ ತೆಗೆದುಕೊಂಡು, ಸಫಾಯಿ ಕರ್ಮಚಾರಿಗಳ ಕ್ಷೇಮಾಭ್ಯುದಯಕ್ಕೆ ಸಂಬಂಧಪಟ್ಟ ಯಾವುದೇ ವಿಷಯದ ಬಗ್ಗೆ ರಾಜ್ಯ ಸರ್ಕಾರಕ್ಕೆ ನಿಯತ ಕಾಲಿಕ ವರದಿಗಳನ್ನು ನೀಡುವುದು; ಮತ್ತು

(5) ರಾಜ್ಯ ಸರ್ಕಾರವು ಅದಕ್ಕೆ ಉಲ್ಲೇಖಿಸಬಹುದಾದ ಯಾವುದೇ ಇತರ ವಿಷಯವನ್ನು ಪರಿಶೀಲಿಸುವುದು.

ಮತ್ತು ಇತರ ಕೆಲವು ಆನುಷಂಗಿಕ ಉಪಬಂಧಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ ವಾರ್ಷಿಕ 50.00 ಲಕ್ಷ ರೂಪಾಯಿಗಳ ಆವರ್ತಕ ವೆಚ್ಚವು ಮತ್ತು 70–00 ಲಕ್ಷ ರೂಪಾಯಿಗಳ ಅನಾವರ್ತಕ ವೆಚ್ಚವು ಉಂಟಾಗುವುದೆಂದು ಅಂದಾಜು ಮಾಡಲಾಗಿದೆ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತ ಜ್ಞಾಪನ ಪತ್ರ

| | | |
|---|---|---|
| **(1)** | **ಖಂಡ 4:** | 4ನೇ ಖಂಡದ (5)ನೇ ಉಪಖಂಡವು, ಆಯೋಗದ ಅಧ್ಯಕ್ಷರು ಮತ್ತು ಸದಸ್ಯರ ಪದಾವಧಿ ಮತ್ತು ವೇತನಗಳು, ಭತ್ಯೆಗಳು, ಸೇವಾ ಷರತ್ತುಗಳನ್ನು ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| (2) | **ಖಂಡ 5:** | 5ನೇ ಖಂಡವು, ಆಯೋಗದ ಅಧಿಕಾರಿಗಳು ಮತ್ತು ಇತರ ಉದ್ಯೋಗಿಗಳಿಗೆ ಸಂಖ್ಯಾಬಲ ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳನ್ನು ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **(3)** | **ಖಂಡ 9:** | 9ನೇ ಖಂಡದ (v)ನೇ ಉಪಖಂಡವು, ಆಯೋಗವು ಅಧಿಕಾರಗಳನ್ನು ಚಲಾಯಿಸಬಹುದಾದ ಇತರ ವಿಷಯಗಳನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **(4)** | **ಖಂಡ 11:** | (i) 11ನೇ ಖಂಡದ (1)ನೇ ಉಪಖಂಡವು, ಆಯೋಗದ ಆದಾಯ ಮತ್ತು ವೆಚ್ಚಗಳ ಲೆಕ್ಕ ತತ್ವಗಳನ್ನು ಇಡುವ ವಿಧಾನಗಳನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(ii) 11ನೇ ಖಂಡದ (2)ನೇ ಉಪಖಂಡವು, ಲೆಕ್ಕಪತ್ರಗಳ ವಾರ್ಷಿಕ ವಿವರಗಳ ನಮೂನೆಯನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(iii) 11ನೇ ಖಂಡದ (5)ನೇ ಉಪಖಂಡವು ಲೆಕ್ಕಪರಿಶೋಧನೆಯ ಅಂಥ ವೆಚ್ಚಗಳ ಸಂದಾಯವನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(iv) 11ನೇ ಖಂಡದ (6)ನೇ ಉಪಖಂಡವು ವಾರ್ಷಿಕ ಲೆಕ್ಕಪತ್ರಗಳ ವಿವರಗಳನ್ನು ಪ್ರಕಟಿಸುವ ವಿಧಾನಗಳನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **(5)** | **ಖಂಡ 13:** | 13ನೇ ಖಂಡವು, ಹಣಕಾಸು ವರ್ಷದಲ್ಲಿ ವಾರ್ಷಿಕ ವರದಿಯನ್ನು ಸಿದ್ಧಪಡಿಸುವ ನಮೂನೆ ಮತ್ತು ಸಮಯವನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

ಮೇಲಿನ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಎ. ನಾರಾಯಣಸ್ವಾಮಿ**
ಸಮಾಜ ಕಲ್ಯಾಣ ಮತ್ತು ಬಂದೀಖಾನೆ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## *KARNATAKA LEGISLATIVE ASSEMBLY*

### *THIRTEENTH LEGISLATIVE ASSEMBLY*

### *FIFTEENTH SESSION*

## *THE KARNATAKA STATE COMMISSION FOR SAFAI KARMACHARIS BILL, 2012*

***(L.A. Bill No. 39 of 2012)***

A Bill to constitute the Karnataka State Commission for Safai Karmacharis.

Whereas it is expedient to constitute a Commission for the Safai Karmacharis and for matters connected therewith or incidental thereto;

Be it enacted by Karnataka State Legislature in the Sixty third year of the Republic of India as follows:-

***CHAPTER - I***

***PRELIMINARY***

***1. Short title and commencement.***- (1) This Act may be called the Karnataka State Commission for Safai Karmacharis Act, 2012.

(2) It shall come into force on such date as the State Government may, by notification, appoint.

***2. Definitions***. In this Act, unless the context otherwise requires,.-

(1) "Chairperson" means the Chairperson of the Karnataka State Commission for Safai Karmacharis;

(2) "Commission" means the Karnataka State Commission for Safai Karmacharis constituted under section 3;

(3) "Member" means a Member of the Commission;

(4) "prescribed" means prescribed by rules made under this Act;

(5) "Safai Karmachari" means a person engaged in, or employed for, manually carrying human excreta or any sanitation work;

***CHAPTER - II***

***STATE COMMISSION FOR SAFAI KARMACHARIS***

***3. Constitution of the Commission.***- (1) The State Government shall, by notification in the Official Gazette, constitute a Commission to be known as the Karnataka State Commission for Safai Karmacharis to exercise the powers conferred on, and to perform the functions assigned to it under this Act consisting of the following, namely:-

(i) A Chairperson to be nominated by State Government who in its opinion is a person having knowledge and associated with the socio-economic development and welfare of Safai Karmacharis;

(ii) Two members out of whom one shall be a women to be nominated by the State Government who in its opinion is a person having knowledge and associated with the socio-economic development and welfare of Safai Karmacharis.

(2) The Head quarters of the Commission shall be at Bangalore.

***4. Term of office and conditions of service of the Chairperson and Member.***- (1) Subject to the pleasure of the State Government, the Chairperson and every Member shall hold office for such period not exceeding three years as may be specified by the State Government in this behalf.

(2) The Chairperson or a Member may, at any time by giving notice in writing under his signature, addressed to the State Government, resign from the office of the Chairperson or the Member, as the case may be.

(3) The State Government may by order, remove from office, the Chairperson or any Member if the chairperson or such member, as the case may be,-

(a) becomes an un discharged insolvent; or

(b) is convicted and sentenced to imprisonment for an offence which, in the opinion of the State Government, involves moral turpitude; or

(c) is of unsound mind and stands so declared by a competent court of law; or

(d) refuses to act or becomes incapable of so acting; or

(e) without obtaining leave, absents himself from the commission or absents from three consecutive meetings of the commission; or

(f) in the opinion of the State Government has so abused the position of Chairperson or Member so as to render that person's continuance in office detrimental to the interest of Safai Karmacharis in the public interest:

Provided that no person shall be so removed under this clause unless that person has been given a reasonable opportunity of being heard in the matter.

(4) A vacancy caused under sub-section (2) or otherwise, shall be filled by fresh nomination, by the State Government.

(5) The salaries and allowances payable to and other terms and conditions of service of the Chairperson, and Members shall be such as may be prescribed.

***5. Staff of the Commission***.- The State Government shall provide the Commission with such officers and employees who are Government Servants as may be required for the proper functioning of the Commission under this Act. The strength and terms and conditions of the Officers and the employees of the Commission shall be such as may be prescribed.

***6. Vacancy, etc., not to invalidate the proceedings of the Commission.-*** No act or proceeding of the Commission shall be questioned or shall be invalid merely on the ground of the existence of any vacancy or defect in the constitution of the commission.

***7. Procedure to be regulated by the Commission***.- (1) The Commission shall meet at such time and place as the Chairperson may think fit.

(2) Subject to the provisions of this Act and the rules made thereunder, the commission shall have the power to regulate its own procedure.

(3) All orders and decisions of the Commission shall be authenticated by the Chairperson or any other officer of the Commission duly authorised by the Chairperson in this behalf.

## *CHAPTER - III*

## *FUNCTIONS AND POWERS OF THE COMMISSION*

***8. Functions of the Commission***.-(1) The Commission shall perform all or any of the following functions, namely: -

(a) recommend to the State Government specific programs of action towards elimination of inequalities in status, facilities and opportunities for Safai Karmacharis under a time-bound action plan;

(b) to study and evaluate the implementation of the programs and schemes relating to the social and economic rehabilitation of Safai Karmacharis and make recommendations to the State Government for Co-ordination and implementation of such programs and schemes;

(c) to enquire in to specific grievances and take notice of matters relating to non-implementation of,-

- (i) programs or schemes in respect of any group of Safai Karmacharis;
- (ii) decisions, guidelines or instructions, aimed at mitigating the hardship of Safai Karmacharis;
- (iii) measures for the social and economic upliftment of Safai Karmacharis;
- (iv) the provisions of any law in its application to Safai Karmacharis and take up such matters with the concerned authorities.

(d) to make periodical reports to the State Government on any matter relating to Safai Karmacharis, taking into account any difficulties or disabilities being encountered by Safai Karamcharis;

(e) any other matter which may be referred to it by the State Government.

(2) In the discharge of its functions under sub-section (1), the Commission shall have power to call for information with respect to any matter specified in that sub-section from State Government departments and its agencies/Corporations and local bodies.

***9. Powers of the Commission.-*** The Commission shall while investigating /enquiring any matter under section 8, have all the powers of civil court trying a suit under the code of civil procedure 1908, and in particular in respect of the following matters, namely:-

(i) summoning and enforcing the attendance of any person from any part of the state and examining him on oath.

(ii) discovery and production of any documents and witness.

(iii) receiving any evidence on affidavits.

(iv) requisitioning for any public record or copy there of from any court or office,

(v) any other matter which may be prescribed.

## *CHAPTER - IV*

## *FINANCE, ACCOUNTS AND AUDIT*

***10. Grants by the State Government.-*** (1) The State Government shall after due appropriation made by the State Legislature by law in this behalf, pay to the Commission by way of grants such sums of money as the State Government may think fit, for being utilized for the purposes of this Act.

(2) The Commission may spend such sums out of the grants as it thinks fit for performing the functions under this Act, and such sums shall be treated as expenditure payable out of the grants referred to in sub-section (1).

***11. Accounts and audit.-*** (1) Accounts of income and expenditure of the Commission shall be kept in accordance with such rules, as may be prescribed.

(2) The Commission shall prepare an annual statement of accounts in such form as may be prescribed.

(3) The accounts of the Commission shall be audited annually by such auditor as the State Government may appoint.

(4) The auditor shall, for the purposes of audit have access to all the accounts and other records of the Commission.

(5) The Commission shall pay out of the grant such charges for the audit, as may be prescribed.

(6) As soon as after the receipt of the report from the auditor, the Commission shall send a copy of the annual statement of accounts, together with a copy of the report of the auditor to the State Government and shall cause to be published the annual statement of accounts in such manner as may be prescribed.

(7) After receipt of the audit report the State Government shall take necessary steps to lay the report before both houses of state Legislature.

(8) The State Government may, after perusal of the auditor report give such directions as it thinks fit to the Commission and the Commission shall comply with such directions.

## *CHAPTER - V*

## *MISCELLANEOUS*

***12. Chairperson and Members and staff of the Commission to be the public servants.-*** The Chairperson, every Members, of the Commission and every officers appointed or authorized by the commission to exercise functions under this Act, shall be deemed to be public servants within the meaning of section 21 of the Indian Penal Code (Central Act 45 of 1860).

***13. Annual Report.-*** The Commission shall prepare in such form and at such time for each financial year as may be prescribed its annual report giving a full account of its activities during the previous financial year and forward a copy thereof to the State Government.

***14. Annual report to be laid before State Legislature.-*** The State Government shall cause the annual report to be laid before each House of State Legislature along with the memorandum explaining the action taken or

proposed to be taken on the recommendations of the Commission and the reasons for non-acceptance of the recommendations, if any.

***15. Delegation of powers***. - The Commission may, by general or special order, delegate to the Chairperson or any Member or to any officer of the Commission subject to such conditions and limitations, if any as may be specified therein, such of its powers and duties under this Act as it may deem fit.

***16. Protection of action taken in good faith***. No suit, prosecution or other legal proceeding shall lie against the State Government, Commission, Chairperson, Members or any officer or other employee of the Commission for anything which is done in good faith or intended to be done under this Act.

***17. Power to make rules.-*** (1) The State Government may, by notification in the Official Gazette, make rules to carry out the provisions of this Act.

(2) In particular, and without prejudice to the generality of the foregoing powers, such rules may provide for all or any of the following matters, namely:--

(i) salaries and allowances payable to, and the other terms and conditions of service of, the Chairperson, and Members under sub-section (5) of section 4 and the officers and other employees of the Commission under section 5;

(ii) the form in and the time at which the annual report shall be prepared under section 13.

(iii) any other matter which is required to be, or as the case may be, to be made or prescribed.

(3) Every rule made under this Act shall be laid, as soon as may be after it is made, before both the House of State Legislature while it is in session for a total period of thirty days which may be comprised in one session or in two or more successive sessions, and if, before the expiry of the session immediately following the session or the successive sessions aforesaid, both Houses agree in making any modification in the rule or both Houses agree that the rule should not be made, the rule shall thereafter have effect only in such modified form or be of no effect, as the case may be; so, however, that any such modification or annulment shall be without prejudice to the validity of anything previously done under that rule.

***18. Power to remove difficulties.-*** (1) If any difficulty arises in giving effect to the provisions of this Act, the State Government, may by order published in the official gazette make such provisions not inconsistent with the provisions of this Act as appear to it to be necessary or expedient for removing difficulty:

Provided that no such order shall be made after expiry of the period of two years from the date of commencement of this Act.

(2) Every order made under this section shall as soon as may be after it is made, be laid before both the houses of State Legislature.

***STATEMENT OF OBJECTS AND REASONS***

It is considered necessary to establish a State Commission to ensure welfare measures to Safai Karmacharis to reform the following functions namely:-

(1) to make recommendations to the State Government specific programs of action towards elimination of inequalities in status, facilities and opportunities for Safai Karmacharis under a time-bound action plan;

(2) to study and evaluate the implementation of the programs and schemes relating to the social and economic rehabilitation of Safai Karmacharis and make recommendations to the State Government for co-ordination and implementation of such programs and schemes;

(3) to enquire into specific grievances and take notice of matters relating to non-implementation of,-

(i) programs or schemes in respect of any group of Safai Karmacharis;

(ii) decisions, guidelines or instructions, aimed at mitigating the hardship of Safai Karmacharis;

(iii) measures for the social and economic upliftment of Safai Karmacharis;

(iv) the provisions of any law in its application to Safai Karmacharis and take up such matters with the concerned authorities.

(4) to make periodical reports to the State Government on any matter relating to welfare of Safai Karmacharis, taking into account any difficulties or disabilities being encountered by Safai Karmacharis; and

(5) to look into any other matter which may be referred to it by the State Government.

and Certain other consequential provisions are also made

Hence, the Bill.

***FINANCIAL MEMORANDUM***

There will be an approximate annual recurring expenditure of Rs.50.00 lakhs and non-recurring expenditure of Rs.70.00 lakhs by proposed Legislative measure.

***MEMORANDUM REGARDING DELEGATED LEGISLATION***

***(1) Clause 4:*** Sub-clause (5) of clause 4 empowers the State Government to prescribe the salaries and allowances payable to and other terms and conditions of service of Chairperson and Members of the commission.

***(2) Clause 5:*** Clause 5 empowers the State Government to prescribe by rules, the strength and terms and conditions of officers and other employees of the commission.

***(3) Clause 9:*** Sub-clause (v) of clause 9 empowers the State Government to prescribe by rules any other matter in which powers could be exercised by the Commission.

***(4) Clause 11:***

(i) Sub-clause (1) of clause 11 empowers the State Government to prescribe by rules the manner of keeping accounts of income and expenditure of the commission.

(ii) Sub-clause (2) of clause 11 empowers the State Government to prescribe by rules the form of annual statement of Accounts.

(iii) Sub-clause (5) of clause 11 empowers the State Government to prescribe by rules the Payment of such charges of audit.

(iv) Sub-clause (6) of clause 11 empowers the State Government to prescribe by rules the manner of publication of the annual statement of accounts.

***(4) Clause 13:*** Clause 13 empowers the State Government to prescribe by rules the form and time in the financial year to prepare the annual report.

The above delegation of legislative power is normal in character.

***A. NARAYANASWAMY***
Minister for Social Welfare and Prisons

***P. OMPRAKASHA***
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – *IV-A* | ಬೆಂಗಳೂರು, ಸೋಮವಾರ, ಡಿಸೆಂಬರ್ ೧೦, ೨೦೧೨ (ಮಾರ್ಗಶಿರ ೧೯, ಶಕ ವರ್ಷ ೧೯೩೪) | ನಂ. ೧೦೮೩ |
|---|---|---|


## *KARNATAKA LEGISLATIVE ASSEMBLY SECRETARIAT*

### *NOTIFICATION*

***No. KLA/LGA/37/Bill/2012, Bangalore, Dated: 10.12.2012***

The following Bill was introduced in Legislative Assembly on 10.12.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನೈದನೇ ಅಧಿವೇಶನ**

## ಕರ್ನಾಟಕ ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ವಿಧೇಯಕ, 2012

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 37)**

ಕರ್ನಾಟಕ ರಾಜ್ಯದಲ್ಲಿ, ಕೆಲವು ವರ್ಗಗಳ ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮತ್ತು ಅವುಗಳಿಗೆ ಸಂಬಂಧಿಸಿದ ಎಲ್ಲ ಯಂತ್ರೋಪಕರಣಗಳು ಮತ್ತು ಸಲಕರಣೆಗಳ ರಚನೆ, ನಿರ್ವಹಣೆ ಮತ್ತು ಸುರಕ್ಷಾ ಕಾರ್ಯನಿರ್ವಹಣೆಗೆ ವಿನಿಯಮನವನ್ನು ಉಪಬಂಧಿಸಲು ಒಂದು ವಿಧೇಯಕ.

ಕರ್ನಾಟಕ ರಾಜ್ಯದಲ್ಲಿ ಕೆಲವು ವರ್ಗಗಳ ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮತ್ತು ಅವುಗಳಿಗೆ ಸಂಬಂಧಿಸಿದ ಎಲ್ಲ ಯಂತ್ರೋಪಕರಣಗಳು ಮತ್ತು ಸಲಕರಣೆಗಳ ನಿರ್ಮಾಣ, ನಿರ್ವಹಣೆ ಮತ್ತು ಸುರಕ್ಷಾ ಕಾರ್ಯನಿರ್ವಹಣೆಗೆ ವಿನಿಯಮನವನ್ನು ಉಪಬಂಧಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗುತ್ತದೆ.

(3) ಇದು ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) **"ಪ್ರಾಧಿಕೃತ ಅಧಿಕಾರಿ"** ಎಂದರೆ, ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿ ಅಥವಾ ಸರ್ಕಾರವು ಅಧಿಸೂಚನೆಯ ಮೂಲಕ ಪ್ರಾಧಿಕೃತಗೊಳಿಸಬಹುದಾದ ಅಂಥ ಇತರ ಅಧಿಕಾರಿ;

(ಬಿ) **"ಕಟಕಟೆ (Balustrade)"** ಎಂದರೆ, ಸ್ಥಿರತೆಯನ್ನು ಒದಗಿಸುವ, ಚರಭಾಗಗಳಿಂದ ಸಂರಕ್ಷಿಸುವ ಮತ್ತು ಕೈ ಕಂಬಿಯ ಬೆಂಬಲವನ್ನು ನೀಡುವ ಮೂಲಕ ಬಳಕೆದಾರರ ರಕ್ಷಣೆಯನ್ನು ನಿಶ್ಚಿತಗೊಳಿಸುವ ಎಸ್ಕಲೇಟರ್/ಚರನಡಿಗೆಯ (moving walk) ಭಾಗ;

(ಸಿ) **"ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿ"** ಎಂದರೆ, ಸರ್ಕಾರವು ಹಾಗೆಂದು ನೇಮಿಸಿದ ಒಬ್ಬ ಅಧಿಕಾರಿ;

(ಡಿ) **"ಕೂಂಬ್ ಪ್ಲೇಟ್"** ಎಂದರೆ, ಕೂಂಬ್‌ಗಳನ್ನು ಜೋಡಿಸಿರುವ ಪ್ರತಿಯೊಂದು ಇಳಿದಾಣದ ಒಂದು ಪ್ಲಾಟ್‌ಫಾರ್ಮ್;

(ಇ) **"ಎಸ್ಕಲೇಟರ್"** ಎಂದರೆ, ಬಳಕೆದಾರರನ್ನು ಹೊತ್ತೊಯ್ಯುವ ಮೇಲ್ಮೈಯ (ಉದಾಹರಣೆಗೆ ಮೆಟ್ಟಲುಗಳು) ಸಮತಲ ರೇಖೆಯಲ್ಲಿರುವ ವ್ಯಕ್ತಿಗಳನ್ನು ಮೇಲಕ್ಕೆ ಏರಿಸಲು ಅಥವಾ ಕೆಳಕ್ಕೆ ಇಳಿಸಲು ಬಳಸಿದ ಶಕ್ತಿಚಾಲಿತ, ಇಳಿಜಾರಿರುವ, ನಿರಂತರವಾಗಿ ಚಲಿಸುವ ಮೆಟ್ಟಲು ಮಾರ್ಗ:

ಟಿಪ್ಪಣಿ:– ಎಸ್ಕಲೇಟರುಗಳು ಯಂತ್ರಗಳಾಗಿದ್ದು, ಅವುಗಳು ಕಾರ್ಯಾಚರಣೆಯಲ್ಲಿಲ್ಲದಿದ್ದಾಗ್ಯೂ ಅವುಗಳನ್ನು ಸ್ಥಿರ ಮೆಟ್ಟಲುಗಳೆಂದು ಪರಿಗಣಿಸಲಾಗುವುದಿಲ್ಲ.

(ಎಫ್) "ಸರ್ಕಾರ" ಎಂದರೆ, ರಾಜ್ಯ ಸರ್ಕಾರ;

(ಜಿ) "ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ತಪಾಸಣಾಧಿಕಾರಿ" ಎಂದರೆ, ಸರ್ಕಾರದಿಂದ ಹಾಗೆಂದು ನೇಮಕಗೊಂಡ ಒಬ್ಬ ಅಧಿಕಾರಿ;

(ಎಚ್) **"ಇಳಿದಾಣ"** ಎಂದರೆ, ಒಂದು ಲಿಫ್ಟ್/ಎಸ್ಕಲೇಟರ್/ಪ್ಯಾಸೆಂಜರ್ ಕನ್ವೇಯರ್‌ನ ಒಳಗೆ ಅಥವಾ ಅದರಿಂದ ಪ್ರಯಾಣಿಕರನ್ನು ಒಳ ಬರಮಾಡಿಕೊಳ್ಳಲು ಅಥವಾ ಹೊರಗೆ ಕಳುಹಿಸಲು ಬಳಸಲಾದ ಕಟ್ಟಡದ ಅಥವಾ ನಿರ್ಮಿತಿಯ ಒಂದು ಭಾಗ;

(ಐ) "ಲೈಸೆನ್ಸ್" ಎಂದರೆ, 4ನೇ ಪ್ರಕರಣದ ಅಡಿಯಲ್ಲಿ ಮಂಜೂರಾದ ಲೈಸೆನ್ಸ್;

(ಜೆ) "ಲಿಫ್ಟ್" ಎಂದರೆ ಎಲಿವೇಟರ್ ಅಥವಾ ಕಾರ್‌ನಿಂದ ಸಜ್ಜುಗೊಳಿಸಲಾದ, ನೇರವಾಗಿ ಮೇಲು– ಕೆಳಗಿನ ದಿಕ್ಕಿನಲ್ಲಿ ಚಲಿಸುವ, ಶಕ್ತಿಯಿಂದ ಕೆಲಸ ಮಾಡುವ, ಪ್ರಯಾಣಿಕರನ್ನು ಅಥವಾ ಸರಕುಗಳನ್ನು ಅಥವಾ ಅವೆರಡನ್ನೂ ಸಾಗಿಸುವಂತೆ ವಿನ್ಯಾಸಗೊಳಿಸಲಾದ ಮೇಲೆತ್ತುವ ಸಾಧನ ಅಥವಾ ಏರಿಳಿಸುವ ಯಾಂತ್ರಿಕ ವ್ಯವಸ್ಥೆ;

(ಕೆ) "ಲಿಫ್ಟ್ ಕಾರ್" ಎಂದರೆ, ಪ್ರಯಾಣಿಕರು ಅಥವಾ ಸರಕುಗಳು ಅಥವಾ ಅವೆರಡನ್ನೂ ಒಯ್ಯುವುದಕ್ಕಾಗಿ ಉಪಯೋಗಿಸುವ ಲಿಫ್ಟಿನ ಚೌಕಾಕಾರದ ಗೂಡು ಅಥವಾ ಚಿಕ್ಕ ಕೋಣೆ ಮತ್ತು ಇದರಲ್ಲಿ ನೆಲಗಟ್ಟು ಅಥವಾ ವೇದಿಕೆ, ಕಾರ್ ಚೌಕಟ್ಟು, ಜೋಲಿ ಮತ್ತು ಸುತ್ತುಗಟ್ಟು ರಚನೆಯನ್ನು ಒಳಗೊಂಡಿರುತ್ತದೆ. ಆದರೆ, ಇದರಲ್ಲಿ 1948ರ ಕಾರ್ಖಾನೆಗಳ ಅಧಿನಿಯಮವು ಅನ್ವಯವಾಗುವ ಏರಿಳಿಸುವ ಸಾಧನ ಅಥವಾ ಲಿಫ್ಟ್ ಒಳಗೊಳ್ಳುವುದಿಲ್ಲ;

(ಎಲ್) "ಲಿಫ್ಟ್ ಅಳವಡಿಕೆ"ಯು, ಲಿಫ್ಟ್, ಲಿಫ್ಟ್ ಕಾರ್, ಲಿಫ್ಟ್ ಮಾರ್ಗ, ಲಿಫ್ಟ್ ಮಾರ್ಗದ ಸುತ್ತುಗಟ್ಟು ಮತ್ತು ಲಿಫ್ಟ್ ಚಾಲನಾ ಯಾಂತ್ರಿಕ ವ್ಯವಸ್ಥೆ ಹಾಗೂ ಲಿಫ್ಟ್ ಕಾರ್ಯಾಚರಣೆಗೆ ನೇರವಾಗಿ ಸಂಬಂಧಪಟ್ಟ ಎಲ್ಲ ಹಗ್ಗಗಳು, ಕೇಬಲ್‌ಗಳು, ತಂತಿಗಳು ಮತ್ತು ಸ್ಥಿರ ಯಂತ್ರವನ್ನು ಒಳಗೊಂಡ ಯಾವುದೇ ಲಿಫ್ಟ್‌ನ ಅಳವಡಿಕೆ;

(ಎಂ) **"ಪ್ಯಾಸೆಂಜರ್ ಕನ್ವೇಯರ್"** ಎಂದರೆ, ಒಂದೇ ಅಥವಾ ವಿವಿಧ ಸಂಚಾರಿ ಹಂತಗಳ ನಡುವೆಯಾಗಲೀ ಪ್ರಯಾಣಿಕರು ಮತ್ತು ಸರಕುಗಳ ಸಾಗಣೆಗಾಗಿ ಶಕ್ತಿ ಚಾಲಿತ ಸ್ಥಾಪನೆಯಾದ ಕೊನೆಯಿಲ್ಲದ ಚರ ನಡಿಗೆ ಮಾರ್ಗ (moving walk/travellater) (ಉದಾಹರಣೆಗೆ ಪ್ಯಾಲೆಟ್‌ಗಳು, ಬೆಲ್ಟ್);

ಟಿಪ್ಪಣಿ:– ಪ್ಯಾಸೆಂಜರ್ ಕನ್ವೇಯರ್‌ಗಳು (ಮೂವಿಂಗ್ ವಾಕ್ ಅಥವಾ ಟ್ರಾವೆಲೇಟರ್) ಯಂತ್ರಗಳು ಮತ್ತು ಅವುಗಳು ಕಾರ್ಯಾಚರಣೆಯಲ್ಲಿಲ್ಲದಿರುವಾಗ್ಯೂ ಸ್ಥಿರ ಪ್ರವೇಶದ್ವಾರವೆಂದು ಪರಿಗಣಿಸತಕ್ಕದ್ದಲ್ಲ.

(ಎನ್) "ಶಕ್ತಿ" ಎಂದರೆ, ಮಾನವರಿಂದ ಅಥವಾ ಪ್ರಾಣಿಗಳಿಂದ ಉತ್ಪಾದಿತವಾಗದ ಯಾವುದೇ ಶಕ್ತಿಯ ರೂಪ;

(ಒ) **"ನಿರ್ಧರಿತ ಭಾರ"** ಎಂದರೆ, ನಿರ್ಧರಿತ ವೇಗದಲ್ಲಿ ಕಾರ್ಯಾಚರಣೆ ಮಾಡಲು ವಿನ್ಯಾಸಗೊಳಿಸಲಾದ ಮತ್ತು ಸ್ಥಾಪನೆಯಾದ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನಲ್ಲಿನ ಭಾರ;

(ಪಿ) **"ನಿರ್ಧರಿತ ವೇಗ"** ಎಂದರೆ, ಕಾರ್ಯಾಚರಣೆಗಾಗಿ ವಿನ್ಯಾಸಗೊಳಿಸಿದ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ವೇಗ;

(ಕ್ಯೂ) **"ನೋಂದಣಿ"** ಎಂದರೆ, ಕರ್ನಾಟಕ ರಾಜ್ಯದೊಳಗೆ ಈಗಾಗಲೇ ಸ್ಥಾಪಿತವಾಗಿರುವ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಅಳವಡಿಕೆ/ಸ್ಥಾಪನೆ ಮತ್ತು/ಅಥವಾ ನಿರ್ವಹಣೆಯನ್ನು ಮಾಡುವ ಉದ್ದೇಶದಿಂದ, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಯಾವೊಬ್ಬ ತಯಾರಕ ಅಥವಾ ಮಾಡುವವರು ಅಥವಾ ಯಾವೊಬ್ಬ ಇತರ ವ್ಯಕ್ತಿಯು, ಲಿಫ್ಟ್‌ಗಳು, ಎಸ್ಕಲೇಟರ್‌ಗಳು ಮತ್ತು ಪ್ಯಾಸೆಂಜರ್ ಕನ್ವೇಯರ್‌ನ ಮುಖ್ಯ ತಪಾಸಣಾಧಿಕಾರಿಯೊಂದಿಗೆ ನೋಂದಣಿ ಮಾಡಿಕೊಳ್ಳುವುದು;

(ಆರ್) "ನೋಂದಾಯಿತ ವ್ಯಕ್ತಿ" ಎಂದರೆ, ಕರ್ನಾಟಕ ರಾಜ್ಯದೊಳಗೆ ಈಗಾಗಲೇ ಸ್ಥಾಪಿತವಾಗಿರುವ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಅಳವಡಿಕೆ ಅಥವಾ ಸ್ಥಾಪನೆ ಮತ್ತು/ಅಥವಾ ನಿರ್ವಹಣೆಯನ್ನು ಮಾಡುವ ಉದ್ದೇಶದಿಂದ, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಮುಖ್ಯ ತಪಾಸಣಾಧಿಕಾರಿಯೊಂದಿಗೆ ನೋಂದಣಿ ಮಾಡಿಕೊಳ್ಳುವ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಯಾವೊಬ್ಬ ತಯಾರಕ ಅಥವಾ ಮಾಡುವವರು ಅಥವಾ ಯಾವೊಬ್ಬ ಇತರ ವ್ಯಕ್ತಿ;

(ಎಸ್) **"ಪ್ರಯಾಣ (ಏರುವುದು)"** ಎಂದರೆ, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಕೆಳಗಿನ ಕೊನೆಯ ಇಳಿದಾಣ ಮತ್ತು ಮೇಲಿನ ಕೊನೆಯ ಇಳಿದಾಣದ ನಡುವಿನ ಲಂಬವಾದ ದೂರ.

**3. ಲಿಫ್ಟ್/ಎಸ್ಕಲೇಟರ್/ಪ್ಯಾಸೆಂಜರ್ ಕನ್ವೇಯರನ್ನು ಅಳವಡಿಸಲು ಅಥವಾ ಸ್ಥಾಪಿಸಲು ಅನುಮತಿ.**– (1) ಈ ಅಧಿನಿಯಮವು ಪ್ರಾರಂಭವಾದ ನಂತರ, ಯಾವ ಸ್ಥಳದಲ್ಲಿ ಅಂಥ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಅಳವಡಿಸಲು ಅಥವಾ ಸ್ಥಾಪಿಸಲು ಉದ್ದೇಶಿಸಲಾಗಿದೆಯೋ ಆ ಸ್ಥಳದ ಪ್ರತಿಯೊಬ್ಬ ಮಾಲೀಕನು, ಅಂಥ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಅಳವಡಿಸಲು ಅಥವಾ ಸ್ಥಾಪಿಸಲು ಅನುಮತಿಗಾಗಿ ಈ ಸಂಬಂಧದಲ್ಲಿ ಸರ್ಕಾರವು, ಅಧಿಸೂಚನೆಯ ಮೂಲಕ, ಪ್ರಾಧಿಕೃತಗೊಳಿಸಬಹುದಾದ ಅಂಥ ಅಧಿಕಾರಿಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು. ಅಂಥ ಅರ್ಜಿಯು ಲಿಖಿತದಲ್ಲಿರತಕ್ಕದ್ದು ಮತ್ತು ಗೊತ್ತುಪಡಿಸಬಹುದಾದ ಅಂಥ ನಮೂನೆಯಲ್ಲಿರತಕ್ಕದ್ದು. ಅಂಥ ಅರ್ಜಿಯು ಈ ಮುಂದಿನದನ್ನು ನಿರ್ದಿಷ್ಟಪಡಿಸತಕ್ಕದ್ದು,–

**ಎ. ಲಿಫ್ಟ್‌ನ ಸ್ಥಾಪನೆ:**

(1) ಲಿಫ್ಟ್‌ನ ಮಾದರಿ;

(2) ಕಾರ್ಯಾಚರಣೆಗೆ ವಿನ್ಯಾಸಗೊಳಿಸಿರುವ ಲಿಫ್ಟ್‌ನ ನಿರ್ಧರಿತ ಗರಿಷ್ಠ ವೇಗದ ಪ್ರಮಾಣ;

(3) ತಯಾರಕನ ಅಥವಾ ವಿನ್ಯಾಸಕಾರನ ನಿರ್ಧಾರಿತ ತೂಕದ – ಸಾಮರ್ಥ್ಯ;

(4) ಲಿಫ್ಟ್ ನಿರ್ವಾಹಕನ ಜೊತೆಗೆ ಲಿಫ್ಟ್ ಒಯ್ಯಬಹುದಾದ ಪ್ರಯಾಣಿಕರ ಗರಿಷ್ಠ ಸಂಖ್ಯೆ;

(5) ಗರಿಷ್ಠ ಭಾರವನ್ನು ಒಯ್ಯುವ ಲಿಫ್ಟ್‌ಕಾರಿನ ಒಟ್ಟು ತೂಕ;

(6) ಸರಿದೂಗುವ ಭಾರ;

(7) ಆಧಾರ ಕೇಬಲ್‌ಗಳ ಸಂಖ್ಯೆ, ವಿವರಣೆ, ತೂಕ ಮತ್ತು ಗಾತ್ರ;

(8) ಲಿಫ್ಟ್ ಕಾರ್‌ನ ತೀರ ಕೆಳಭಾಗದಿಂದ ಅದು ಕೆಳ ಅಂತಸ್ತಿನಲ್ಲಿರುವಾಗ ಆ ಗುಂಡಿಯ ಆಳ;

(9) ನಿಯಮಿಸಬಹುದಾದಂತೆ ತೊಲೆಗಳ ತೂಕ ಮತ್ತು ಗಾತ್ರಗಳೊಂದಿಗೆ ಮೇಲ್ಭಾಗದ ವ್ಯವಸ್ಥೆಯ ರಚನೆಯ ವಿವರಗಳು; ಮತ್ತು

(10) ನಿಯಮಿಸಬಹುದಾದ ಅಂಥ ಇತರ ವಿವರಗಳು.

**ಬಿ. ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರಿನ ಸ್ಥಾಪನೆ:**

(ಎ) ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರಿನ ಮಾದರಿ;

(ಬಿ) ಕಾರ್ಯಾಚರಣೆಗೆ ವಿನ್ಯಾಸಗೊಳಿಸಿರುವ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರಿನ ವೇಗದ ಪ್ರಮಾಣ;

(ಸಿ) ಇಳಿಜಾರು ಕೋನ;

(ಡಿ) ಕಟಕಟೆಗಳ ನಡುವಿನ ಅಗಲ;

(ಇ) ಹ್ಯಾಂಡ್‌ರೈಲ್ಸ್, ಸ್ಟೆಪ್ ಟ್ರೆಡ್ಸ್, ಲ್ಯಾಂಡಿಂಗ್ ಕೂಂಬ್ ಪ್ಲೇಟ್ಸ್, ಟ್ರಷಸ್ಸ್ ಅಥವಾ ಗ್ರಿಡರ್ಸ್ ಮತ್ತು ಸ್ಟೆಪ್ ವ್ಹೀಲ್ ಟ್ರ್ಯಾಕ್ಸ್‌ಗಳ ವಿವರಗಳು;

(ಎಫ್) ಕಿಲೋಗ್ರಾಂನಲ್ಲಿ ನಿರ್ಧಾರಿತ ಭಾರ;

(ಜಿ) ನಿರ್ಧಾರಿತ ಭಾರದೊಂದಿಗೆ ಗಂಟೆಯೊಂದಕ್ಕೆ ವ್ಯಕ್ತಿಗಳ ಸಂಖ್ಯೆ;

(ಹೆಚ್) ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನಲ್ಲಿ ಸ್ಥಾಯೀ ಭಾರಗಳ ಆಧಾರದ ಮೇಲೆ ಸುರಕ್ಷತಾ ಅಂಶಗಳು;

(ಐ) ಏರುವ ಪ್ರಯಾಣ, ಮೀಟರುಗಳಲ್ಲಿ; ಮತ್ತು

(ಜೆ) ನಿಯಮಿಸಬಹುದಾದ ಅಂಥ ಇತರ ವಿವರಗಳು.

(2) ಅಳವಡಿಸುವುದಕ್ಕೆ ಅಥವಾ ಸ್ಥಾಪಿಸಲು ಅನುಮತಿಸುವುದಕ್ಕಾಗಿ ಹೊರಡಿಸಲಾದ ಪ್ರತಿಯೊಂದು ಅರ್ಜಿಯು ನಿಯಮಿಸಬಹುದಾದ ಅಂಥ ಫೀಜಿನೊಂದಿಗೆ ಇರತಕ್ಕದ್ದು.

(3) ಫೀಜು ಪಾವತಿ ಖಜಾನೆ ಚಲನ್‌ನೊಂದಿಗೆ ಅಂಥ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಪ್ರಾಧಿಕೃತ ಅಧಿಕಾರಿಯು, ಅವಶ್ಯವಿರಬಹುದಾದ ಅಂಥ ವಿಚಾರಣೆಯನ್ನು ಮಾಡಿದ ತರುವಾಯ ಮತ್ತು ಅಂಥ ಮಾಹಿತಿಯನ್ನು ಒದಗಿಸಲು ಅರ್ಜಿದಾರನನ್ನು ಅಗತ್ಯಪಡಿಸಿದ ತರುವಾಯ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್ ಅನ್ನು ಅಳವಡಿಸಲು ಅಥವಾ ಸ್ಥಾಪಿಸಲು ಅನುಮತಿಯನ್ನು ಮಂಜೂರು ಮಾಡಬಹುದು ಅಥವಾ ಮಂಜೂರಾತಿಯನ್ನು ನಿರಾಕರಿಸಬಹುದು. ಅಂಥ ಅನುಮತಿಯು, ಅದನ್ನು ನೀಡಿದ ದಿನಾಂಕದಿಂದ ಹನ್ನೆರಡು ತಿಂಗಳ ವರೆಗಿನ ಅವಧಿಗೆ ಮಾತ್ರ ಸಿಂಧುವಾಗಿರತಕ್ಕದ್ದು.

(4) ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಅಳವಡಿಕೆಯು, ಅನುಮತಿಯ ಸಿಂಧುತ್ವದ ಅವಧಿಯೊಳಗೆ ಪೂರ್ಣಗೊಳಿಸದಿದ್ದ ಸಂದರ್ಭದಲ್ಲಿ, ಹೊಸದಾಗಿ ಅರ್ಜಿಯನ್ನು ಸಲ್ಲಿಸುವ ಮೂಲಕ ಅದನ್ನು ನವೀಕರಿಸಿಕೊಳ್ಳತಕ್ಕದ್ದು.

(5) ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಮಾಲೀಕನೂ ಆದ ಯಾವೊಬ್ಬ ವ್ಯಕ್ತಿಯು, ಪ್ರಾಧಿಕೃತ ಅಧಿಕಾರಿಯಿಂದ ಅಳವಡಿಕೆ ಅಥವಾ ಸ್ಥಾಪನೆಯ ಅನುಮತಿಯನ್ನು ಪಡೆಯದ ಹೊರತು ತನ್ನ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಅಳವಡಿಕೆ ಅಥವಾ ಸ್ಥಾಪನೆಯನ್ನು ಮಾಡತಕ್ಕದ್ದಲ್ಲ.

(6) ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರಿನ ಮಾಲೀಕನಾದ ಯಾವೊಬ್ಬ ವ್ಯಕ್ತಿಯು, ಲಿಫ್ಟ್‌ಗಳು, ಎಸ್ಕಲೇಟರುಗಳು ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಯೊಂದಿಗೆ ನೋಂದಾಯಿತರಾದವರ ಹೊರತು ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ತಯಾರಕ ಅಥವಾ ಮಾಡುವವನು ಅಥವಾ ಯಾವೊಬ್ಬ ಇತರ ವ್ಯಕ್ತಿಯ ಮೂಲಕ, ತನ್ನ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್ ಅನ್ನು ಅಳವಡಿಸಿಕೊಳ್ಳತಕ್ಕದ್ದಲ್ಲ.

**4. ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಬಳಸಲು ಲೈಸೆನ್ಸ್.–** (1) 3ನೇ ಪ್ರಕರಣದ ಅಡಿಯಲ್ಲಿ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಅಳವಡಿಸಲು ಯಾವ ಸ್ಥಳದ ಮಾಲೀಕನಿಗೆ ಅನುಮತಿಸಲಾಗಿದೆಯೋ ಆ ಸ್ಥಳದ ಪ್ರತಿಯೊಬ್ಬ ಮಾಲೀಕನು, ಭಾರತೀಯ ಗುಣಮಟ್ಟ ಬ್ಯೂರೋ ಪದ್ಧತಿಗಳ ಅಸ್ತಿತ್ವದಲ್ಲಿರುವ ಸಂಬಂಧಪಟ್ಟ ಸಂಹಿತೆ ಮತ್ತು ಕೇಂದ್ರ ವಿದ್ಯುಚ್ಛಕ್ತಿ ಪ್ರಾಧಿಕಾರ (ಸುರಕ್ಷತೆ ಮತ್ತು ವಿದ್ಯುತ್ ಸರಬರಾಜಿಗೆ ಸಂಬಂಧಿಸಿದ ಕ್ರಮಗಳು) ವಿನಿಯಮಗಳು, 2010ರ ಅನ್ವಯ, ತನ್ನ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್

ಕನ್ವೇಯರನ್ನು ಸ್ಥಾಪಿಸತಕ್ಕದ್ದು. ಬಳಸಲಾದ ಎಲ್ಲಾ ವಸ್ತುಗಳು ಮತ್ತು ಸಲಕರಣೆಗಳು, ಭಾರತೀಯ ಗುಣಮಟ್ಟಗಳ ಬ್ಯೂರೋ ಅಥವಾ ಅಂತರರಾಷ್ಟ್ರೀಯ ವಿದ್ಯುನ್ಮಾನ - ತಾಂತ್ರಿಕ ಆಯೋಗದ ಸಂಬಂಧಪಟ್ಟ ತಪಶೀಲು ಪಟ್ಟಿಯನ್ನು ಅಂಥ ತಪಶೀಲು ಪಟ್ಟಿಗಳನ್ನು ಈಗಾಗಲೇ ಹೇಳಲಾಗಿರುವಲ್ಲಿ, ಸಮರ್ಥಿಸತಕ್ಕದ್ದು.

(2) 3ನೇ ಪ್ರಕರಣದ ಅಡಿಯಲ್ಲಿಗೆ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಅಳವಡಿಸಲು ಯಾವ ಸ್ಥಳದ ಮಾಲೀಕನಿಗೆ ಅನುಮತಿಸಲಾಗಿದೆಯೋ ಆ ಸ್ಥಳದ ಪ್ರತಿಯೊಬ್ಬ ಮಾಲೀಕನು, ಅಂಥ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಅಳವಡಿಸಿದ ತರುವಾಯ, ಒಂದು ತಿಂಗಳ ಒಳಗೆ, ಪ್ರಾಧಿಕೃತ ಅಧಿಕಾರಿಗೆ ಅಂಥ ಅಳವಡಿಕೆಯನ್ನು ಪೂರ್ಣಗೊಳಿಸಿದ ಬಗ್ಗೆ ಲಿಖಿತದಲ್ಲಿ ತಿಳಿವಳಿಕೆ ಪತ್ರವನ್ನು ತಲುಪಿಸತಕ್ಕದ್ದು ಅಥವಾ ಕಳುಹಿಸತಕ್ಕದ್ದು ಅಥವಾ ತಲುಪುವಂತೆ ಅಥವಾ ಕಳುಹಿಸುವಂತೆ ಮಾಡತಕ್ಕದ್ದು ಮತ್ತು ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಸಂದರ್ಭಾನುಸಾರವಾಗಿ ಪ್ಯಾಸೆಂಜರ್ ಕನ್ವೇಯರ್ ಕೆಲಸ ಮಾಡುವುದಕ್ಕೆ ಅಥವಾ ಬಳಸುವುದಕ್ಕೆ ಲೈಸೆನ್ಸ್‌ಗಾಗಿ ಅವನಿಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ಲೈಸೆನ್ಸ್‌ಗಾಗಿ ಸಲ್ಲಿಸಿದ ಅರ್ಜಿಯು, ನಿಯಮಿಸಬಹುದಾದ ಅಂಥ ನಮೂನೆಯಲ್ಲಿರತಕ್ಕದ್ದು.

(4) ಅಂಥ ಅರ್ಜಿಯೊಂದಿಗೆ, ಸರ್ಕಾರವು ನಿಯಮಿಸಬಹುದಾದಂತೆ ತಪಾಸಣಾ ಫೀಜನ್ನು ಸಂದಾಯ ಮಾಡತಕ್ಕದ್ದು.

(5) ನಿಯಮಿಸಲಾದ ಫೀಜು ಪಾವತಿ ಚಲನ್‌ನೊಂದಿಗೆ ಅಂಥ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಪ್ರಾಧಿಕೃತ ಅಧಿಕಾರಿಯು, ಅವಶ್ಯವಾಗಬಹುದಾದ ಅಂಥ ವಿಚಾರಣೆಯನ್ನು ಮತ್ತು ತಪಾಸಣೆಯನ್ನು ಮಾಡಿದ ತರುವಾಯ, ತನ್ನ ಷರಾಗಳೊಂದಿಗೆ ಅಂಥ ಶಿಫಾರಸ್ಸನ್ನು ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಗೆ ಕಳುಹಿಸತಕ್ಕದ್ದು. ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಯು, ಈ ಅಧಿನಿಯಮದಲ್ಲಿ ಅಥವಾ ಅದರಡಿಯಲ್ಲಿ ಮಾಡಲಾದ ನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳಿಗೆ ಒಳಪಟ್ಟು, ಲಿಖಿತದಲ್ಲಿ ಕಾರಣಗಳನ್ನು ದಾಖಲಿಸಿ ಲೈಸೆನ್ಸನ್ನು ಮಂಜೂರು ಮಾಡಬಹುದು ಅಥವಾ ಲೈಸೆನ್ಸ್‌ನ ಮಂಜೂರಾತಿಯನ್ನು ನಿರಾಕರಿಸಬಹುದು:

ಪರಂತು, ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಯು, ಲೈಸೆನ್ಸನ್ನು ಮಂಜೂರಾತಿಯನ್ನು ನಿರಾಕರಿಸಿದಲ್ಲಿ, ಅರ್ಜಿದಾರನಿಗೆ ಅಹವಾಲನ್ನು ಹೇಳಿಕೊಳ್ಳುವುದಕ್ಕೆ ಸಾಕಷ್ಟು ಅವಕಾಶವನ್ನು ನೀಡತಕ್ಕದ್ದು.

(6) ಪರಿಕ್ಷಾರ್ಥ ಉದ್ದೇಶಕ್ಕೆ ಹೊರತುಪಡಿಸಿ, ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಯಿಂದ ಲೈಸೆನ್ಸನ್ನು ಪಡೆದುಕೊಳ್ಳದೇ, ಲಿಫ್ಟ್, ಎಸ್ಕಲೇಟರ್ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗೆ ವಿದ್ಯುಚ್ಛಕ್ತಿ ಸರಬರಾಜನ್ನು ಏರ್ಪಡಿಸತಕ್ಕದ್ದಲ್ಲ.

(7) ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರಿನ ಮಾಲೀಕನಾದ ಅಥವಾ ಅಳವಡಿಸುವವನಾದ ಯಾವೊಬ್ಬ ವ್ಯಕ್ತಿಯು, ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಯಿಂದ ಲೈಸೆನ್ಸನ್ನು ಪಡೆದುಕೊಳ್ಳದೇ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಬಳಸತಕ್ಕದ್ದಲ್ಲ.

**5. ಲೈಸೆನ್ಸ್‌ನ ಕಾಲಾವಧಿ.–** ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರಿಗೆ ಯಾವುದೇ ಹೆಚ್ಚಿನ ಸೇರ್ಪಡೆ ಅಥವಾ ಮಾರ್ಪಾಡು ಮಾಡಿದ್ದ ಹೊರತು, ಪ್ರತಿಯೊಂದು ಲೈಸೆನ್ಸು, ಅದನ್ನು ಮಂಜೂರು ಮಾಡಿದ ದಿನಾಂಕದಿಂದ ಹತ್ತು ವರ್ಷಗಳ ಅವಧಿಗಾಗಿ ಸಿಂಧುವಾಗಿರತಕ್ಕದ್ದು. ಲೈಸೆನ್ಸ್‌ನ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು, ಲೈಸೆನ್ಸನ್ನು ನವೀಕರಿಸತಕ್ಕದ್ದು. ಲೈಸೆನ್ಸನ್ನು ನಿಯಮಿಸಬಹುದಾದ ಅಂಥ ಫೀಜಿನೊಂದಿಗೆ ಮತ್ತು ಅಂಥ ಷರತ್ತಿಗೊಳಪಟ್ಟು ಅರ್ಜಿಯನ್ನು ಸಲ್ಲಿಸುವ ಮೂಲಕ ಪ್ರತಿ ಐದು ವರ್ಷಗಳ ಮತ್ತಷ್ಟು ಅವಧಿಗೆ ನವೀಕರಿಸಬಹುದು.

**6. ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರಿನ ತಯಾರಕರು ಅಥವಾ ಮಾಡುವವರು ಅಥವಾ ಇತರ ವ್ಯಕ್ತಿಯ ನೋಂದಣಿ.–** (1) ಯಾವೊಬ್ಬ ವ್ಯಕ್ತಿಯು ಲಿಫ್ಟ್‌ಗಳ ಅಥವಾ ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಯೊಂದಿಗೆ ತಾನೇ ನೋಂದಾಯಿತನಾಗಿದ್ದು ಅಥವಾ ತನ್ನ ನೋಂದಣಿಯನ್ನು ನವೀಕರಿಸಿದ್ದ ಹೊರತು, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಸಂದರ್ಭಾನುಸಾರವಾಗಿ ಪ್ಯಾಸೆಂಜರ್ ಕನ್ವೇಯರಿನ ಅಳವಡಿಕೆ ಅಥವಾ ಸ್ಥಾಪನೆ ಅಥವಾ ನಿಯತಕಾಲಿಕ ಪರೀಕ್ಷೆ ಮತ್ತು ನಿರ್ವಹಣೆಯ ವ್ಯವಹಾರದಲ್ಲಿ ನಿರತನಾಗತಕ್ಕದ್ದಲ್ಲ.

(2) ಅಳವಡಿಸಲು ಅಥವಾ ನಿಯತಕಾಲಿಕ ಪರೀಕ್ಷೆ ಅಥವಾ ಸಂದರ್ಭಾನುಸಾರವಾಗಿ ನಿರ್ವಹಣೆಯನ್ನು ಕೈಗೊಳ್ಳಲು ಉದ್ದೇಶಿಸಿರುವ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ತಯಾರಕನು ಅಥವಾ ಮಾಡುವವನನ್ನು ಒಳಗೊಂಡಂತೆ ಯಾವೊಬ್ಬ ವ್ಯಕ್ತಿಯು ನೋಂದಣಿಯನ್ನು, ಅಂಥ ಫೀಜಿನೊಂದಿಗಿನ ಅರ್ಜಿಯನ್ನು ಸಲ್ಲಿಸಿದ ಮೇಲೆ ಮತ್ತು ನಿಯಮಿಸಬಹುದಾದ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು, ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಯು, ನೋಂದಣಿ ಮಾಡಬಹುದು ಅಥವಾ ನಿಯಮಿಸಬಹುದಾದ ಅಂಥ ಅವಧಿಯ ಅಂತರದ ತರುವಾಯ ನೋಂದಣಿಯನ್ನು ನವೀಕರಿಸಬಹುದು ಅಥವಾ ಲಿಖಿತದಲ್ಲಿ ಕಾರಣಗಳನ್ನು ದಾಖಲಿಸಿ ನೋಂದಣಿಯನ್ನು ನೋಂದಾಯಿಸುವುದನ್ನು ಅಥವಾ ನವೀಕರಿಸುವುದನ್ನು ನಿರಾಕರಿಸಬಹುದು.

(3) (1)ನೇ ಉಪ ಪ್ರಕರಣದ ಅಡಿಯಲ್ಲಿ ನೋಂದಾಯಿತನಾದ ಪ್ರತಿಯೊಬ್ಬ ವ್ಯಕ್ತಿಯು, ನಿಯಮಿಸಬಹುದಾದಂಥ ಲೆಕ್ಕ ಪತ್ರಗಳ ಪುಸ್ತಕಗಳನ್ನು, ಅಂಥ ಸಂಖ್ಯೆಯ ತಂತ್ರಜ್ಞರನ್ನು, ಸ್ಥಾಪನೆ, ಅಳವಡಿಕೆ ಮತ್ತು ಪರೀಕ್ಷಾರ್ಥ ಉಪಕರಣಗಳು ಇತ್ಯಾದಿಗಳನ್ನು ನಿರ್ವಹಿಸತಕ್ಕದ್ದು ಮತ್ತು ಅಂಥ ಅಂತರಗಳಲ್ಲಿ ಪ್ರಾಧಿಕೃತ ಅಧಿಕಾರಿಗೆ ಅಂಥ ವಿವರಪಟ್ಟಿಕೆಗಳನ್ನು ಸಲ್ಲಿಸತಕ್ಕದ್ದು ಮತ್ತು ಅಂಥ ದಾಸ್ತಾವೇಜುಗಳನ್ನು ಒದಗಿಸತಕ್ಕದ್ದು.

(4) ಈ ಅಧಿನಿಯಮದ 3ನೇ ಪ್ರಕರಣದ ಅಡಿಯಲ್ಲಿ ಅನುಮತಿಯನ್ನು ಮಂಜೂರು ಮಾಡುವುದಕ್ಕೆ ಮೊದಲು, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ತಯಾರಕ ಅಥವಾ ಮಾಡುವವನು ಒಳಗೊಂಡಂತೆ ಯಾವೊಬ್ಬ ವ್ಯಕ್ತಿಯು ಒಂದು ಲಿಫ್ಟ್, ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್ ಅನ್ನು ಅಳವಡಿಸತಕ್ಕದ್ದಲ್ಲ ಅಥವಾ ಸ್ಥಾಪಿಸತಕ್ಕದ್ದಲ್ಲ.

(5) ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಅಳವಡಿಕೆ ಅಥವಾ ಸ್ಥಾಪನೆಯಲ್ಲಿ ನಿರತನಾದ, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಪ್ರತಿಯೊಬ್ಬ ತಯಾರಕ ಅಥವಾ ಮಾಡುವವನು ಅಥವಾ ಸಂದರ್ಭಾನುಸಾರವಾಗಿ ಯಾವೊಬ್ಬ ಇತರ ವ್ಯಕ್ತಿಯು, ಈ ಅಧಿನಿಯಮದ 4ನೇ ಪ್ರಕರಣದ ಅಡಿಯಲ್ಲಿ, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಬಳಕೆಯನ್ನು ನಿಶ್ಚಿತಗೊಳಿಸುವ ಲೈಸೆನ್ಸನ್ನು ಮಂಜೂರು ಮಾಡುವುದಕ್ಕೆ ಮೊದಲು ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಬಳಕೆಗಾಗಿ ಬಿಡತಕ್ಕದ್ದಲ್ಲ.

**7. ಲೈಸೆನ್ಸ್ ಇಲ್ಲದೆ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್ ಅನ್ನು ನಡೆಸಬಾರದು.–** ಈ ಸಂಬಂಧದಲ್ಲಿ ರಚಿಸಬಹುದಾದ ಅಂಥ ನಿಯಮಗಳಿಗೆ ಒಳಪಟ್ಟು, ಮತ್ತು ಇದಕ್ಕೆ ಸಂಬಂಧಿಸಿದಂತೆ ಮಂಜೂರು ಮಾಡಲಾದ ಲೈಸೆನ್ಸಿನ ನಿಬಂಧನೆಗಳ ಅಡಿಯಲ್ಲಿ ಮತ್ತು ಅವುಗಳ ಅನುಸಾರವಾಗಿ ಹೊರತು ಯಾವುದೇ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್ ಅನ್ನು ಬಳಸತಕ್ಕದ್ದಲ್ಲ ಅಥವಾ ಕಾರ್ಯನಿರ್ವಹಿಸತಕ್ಕದ್ದಲ್ಲ.

**8. ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್ ಸ್ಥಾಪನೆಗೆ ಸೇರ್ಪಡೆಗಳು ಮತ್ತು ಬದಲಾವಣೆಗಳು.–** 15ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಮಾಡಲು ಅಗತ್ಯಪಡಿಸದಂಥವುಗಳನ್ನು ಹೊರತುಪಡಿಸಿ, ಪ್ರಾಧಿಕೃತ ಅಧಿಕಾರಿಯ ಲಿಖಿತ ಪೂರ್ವ ಅನುಮತಿಯ ಹೊರತು ಯಾವುದೇ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಸಂದರ್ಭಾನುಸಾರವಾಗಿ ಪ್ಯಾಸೆಂಜರ್ ಕನ್ವೇಯರ್‌ನ ಸ್ಥಾಪನೆಗೆ ಯಾವುದೇ ಸೇರ್ಪಡೆಗಳನ್ನು ಅಥವಾ ಬದಲಾವಣೆಗಳನ್ನು ಮಾಡತಕ್ಕದ್ದಲ್ಲ.

**9. ಲಿಫ್ಟ್‌ಗಳ ಅಥವಾ ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ಸ್ಥಾಪನೆಯ ಪರಿಶೀಲನೆಗಾಗಿ ಯಾವುದೇ ಕಟ್ಟಡವನ್ನು ಪ್ರವೇಶಿಸುವ ಹಕ್ಕು.–** (1) ಪ್ರಾಧಿಕೃತ ಅಧಿಕಾರಿ ಅಥವಾ ಲಿಫ್ಟ್‌ಗಳ ಅಥವಾ ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ತಪಾಸಣಾಧಿಕಾರಿಯು, ಅಧಿಭೋಗದಾರನಿಗೆ ಸೂಕ್ತ ನೋಟೀಸನ್ನು ನೀಡಿದ ತರುವಾಯ, ಯಾವ ಕಟ್ಟಡದಲ್ಲಿ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಸ್ಥಾಪಿಸಲಾಗಿದೆಯೋ ಅಥವಾ ಸ್ಥಾಪಿಸಲಾಗುತ್ತಿದೆಯೋ ಅಥವಾ ಯಾವುದರ ಸಂಬಂಧದಲ್ಲಿ ಲೈಸೆನ್ಸ್‌ಗಾಗಿ ಒಂದು ಅರ್ಜಿಯನ್ನು ಸ್ವೀಕರಿಸಲಾಗಿದೆಯೋ ಆ ಯಾವುದೇ ಕಟ್ಟಡವನ್ನು ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಸ್ಥಾಪನೆಯ ಪರಿಶೀಲನೆ ಅಥವಾ ಅನ್ಯಥಾ ಆ ಸ್ಥಳದ ಪರಿಶೀಲನೆಯ ಉದ್ದೇಶಕ್ಕಾಗಿ ಯಾವುದೇ ಸಮಯದಲ್ಲಿ ಪ್ರವೇಶಿಸಬಹುದು.

(2) ಯಾವುದೇ ಕಟ್ಟಡದಲ್ಲಿ, ಯಾವುದೇ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್ ಸುರಕ್ಷಿತವಲ್ಲದ ಸ್ಥಿತಿಯಲ್ಲಿದೆ ಎಂಬುದಾಗಿ ಅಂಥ ಪರಿಶೀಲನೆಯ ನಂತರ ಪ್ರಾಧಿಕೃತ ಅಧಿಕಾರಿ ಅಥವಾ ತಪಾಸಣಾಧಿಕಾರಿಯು ಅಭಿಪ್ರಾಯಪಟ್ಟರೆ, ಅವನು, ಕಟ್ಟಡದ ಮಾಲೀಕ ಅಥವಾ 11ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ನೇಮಕ ಮಾಡಲಾದ ಅವನ ಏಜೆಂಟನಿಗೆ ಅಂಥ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗೆ ಅವನು ಅವಶ್ಯವೆಂದು ಭಾವಿಸಬಹುದಾದ ಅಂಥ ದುರಸ್ತಿ ಅಥವಾ ಬದಲಾವಣೆಗಳನ್ನು, ಅದರಲ್ಲಿ ನಿರ್ದಿಷ್ಟಪಡಿಸಿದ ಸಮಯದೊಳಗೆ ಮಾಡಬೇಕೆಂದು ಅಗತ್ಯಪಡಿಸಿ ಆದೇಶವನ್ನು ಹೊರಡಿಸಬಹುದು ಮತ್ತು ಅವಶ್ಯವಿದ್ದರೆ, ಅಂಥ ದುರಸ್ತಿಗಳು ಅಥವಾ ಬದಲಾವಣೆಗಳನ್ನು ಮಾಡುವವರೆಗೆ ಅಥವಾ ಅಂಥ ಸುರಕ್ಷಿತವಲ್ಲದ ಪರಿಸ್ಥಿತಿಯು ನಿವಾರಣೆಯಾಗುವವರೆಗೆ ಅಂಥ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಬಳಕೆಯನ್ನು ನಿಲ್ಲಿಸುವಂತೆಯೂ ಆದೇಶಿಸಬಹುದು.

(3) 17ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ಯಾವುದೇ ಮೇಲ್ಮನವಿಯನ್ನು ಸಲ್ಲಿಸಿದ್ದರೂ ಸಹ, ಈ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಬಳಸುವುದನ್ನು ನಿಲ್ಲಿಸುವಂತೆ ಪ್ರಾಧಿಕೃತ ಅಧಿಕಾರಿ ಅಥವಾ ಲಿಫ್ಟ್‌ಗಳ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ತಪಾಸಣಾಧಿಕಾರಿಯು ಮಾಡಿದ ಯಾವುದೇ ಆದೇಶವನ್ನು, ಮೇಲ್ಮನವಿ ಪ್ರಾಧಿಕಾರವು ಅಂಥ ಆದೇಶವನ್ನು ವಿಪರ್ಯಾಯಗೊಳಿಸಿದ ಹೊರತು ಅದನ್ನು ಪಾಲಿಸತಕ್ಕದ್ದು.

**10. ಲಿಫ್ಟ್‌ಗಳು ಅಥವಾ ಎಸ್ಕಲೇಟರ್‌ಗಳು ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ಮಾಲೀಕನು ಪರಿಶೀಲನೆಗಾಗಿ ಸೌಕರ್ಯಗಳನ್ನು ಒದಗಿಸುವುದು.–** (1) ಯಾವ ಕಟ್ಟಡದಲ್ಲಿ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಅಳವಡಿಸಲಾಗಿದೆಯೋ ಆ ಕಟ್ಟಡದ ಮಾಲೀಕನು ಅಥವಾ 11ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ನೇಮಕ ಮಾಡಲಾದ ಅವನ ಏಜೆಂಟನು ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಸಂದರ್ಭಾನುಸಾರವಾಗಿ ಪ್ಯಾಸೆಂಜರ್ ಕನ್ವೇಯರ್‌ನ ಪರಿಶೀಲನೆ ಮಾಡುವ ಪ್ರಾಧಿಕೃತ ಅಧಿಕಾರಿಗೆ ಅಥವಾ ಲಿಫ್ಟ್‌ಗಳ ಅಥವಾ ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ತಪಾಸಣಾಧಿಕಾರಿಗೆ ಎಲ್ಲ ಸೂಕ್ತ ಸೌಕರ್ಯಗಳನ್ನು ಒದಗಿಸತಕ್ಕದ್ದು ಮತ್ತು ಪ್ರಾಧಿಕೃತ ಅಧಿಕಾರಿಯು ಅಥವಾ ಲಿಫ್ಟ್‌ಗಳ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ತಪಾಸಣಾಧಿಕಾರಿಯು ಹಾಗೆ ಮಾಡಬೇಕೆಂದು ಆದೇಶಿಸಿದಾಗಲೆಲ್ಲ, ಅವನು ತನ್ನ ಸ್ವಂತ ವೆಚ್ಚದಲ್ಲಿ, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಅಳವಡಿಕೆ ಅಥವಾ ನಿರ್ವಹಣೆಗೆ ಯಾರೊಂದಿಗೆ ಅವನು ಒಪ್ಪಂದ ಮಾಡಿಕೊಂಡಿರುವನೋ ಆ ವ್ಯಕ್ತಿ, ಯಾರಾದರೂ ಇದ್ದರೆ, ಅವನನ್ನು ಅಥವಾ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಪರಿಶೀಲಿಸುವಲ್ಲಿ ಪ್ರಾಧಿಕೃತ ಅಧಿಕಾರಿಗೆ ಅಥವಾ ಲಿಫ್ಟ್‌ಗಳ ಅಥವಾ ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ತಪಾಸಣಾಧಿಕಾರಿಗೆ ಮಾರ್ಗದರ್ಶನ ನೀಡಲು ಸಕ್ಷಮನಾದಂಥ ವ್ಯಕ್ತಿಯನ್ನು ಅಂಥ ಪರಿಶೀಲನೆಯ ಸಮಯದಲ್ಲಿ ಹಾಜರಿರುವಂತೆ ಏರ್ಪಾಟು ಮಾಡತಕ್ಕದ್ದು.

(2) ಮಾಲೀಕ ಅಥವಾ ಸಂದರ್ಭಾನುಸಾರವಾಗಿ ಆತನ ಏಜೆಂಟನು, ಅದರಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಆದೇಶವನ್ನು ಪಾಲಿಸತಕ್ಕದ್ದು ಮತ್ತು ಹಾಗೆ ಪಾಲಿಸಿರುವುದರ ಬಗ್ಗೆ ಒಂದು ವರದಿಯನ್ನು ಲಿಖಿತದಲ್ಲಿ ಪ್ರಾಧಿಕೃತ ಅಧಿಕಾರಿಗೆ ಸಲ್ಲಿಸತಕ್ಕದ್ದು.

**11. ಅಪಘಾತದ ವರದಿ.–** (1) ಯಾವುದೇ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಕಾರ್ಯಾಚರಣೆಯಲ್ಲಿ ಯಾವೊಬ್ಬ ವ್ಯಕ್ತಿಗೆ ಗಾಯವುಂಟಾಗುವ, ಯಾವುದೇ ಅಪಘಾತವುಂಟಾಗಿದ್ದರೆ ಅಥವಾ ಅಪಘಾತವುಂಟಾಗುವ ಸಾಧ್ಯತೆ ಇದ್ದರೆ, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್ ಕೆಲಸ ಮಾಡುತ್ತಿರುವ ಕಟ್ಟಡದ ಮಾಲೀಕ ಅಥವಾ ಅಂಥ ಮಾಲೀಕನು ಏಜೆಂಟನನ್ನು ನೇಮಕ ಮಾಡಿದ್ದರೆ ಅವನು ಹಾಗೂ (3)ನೇ ಉಪಪ್ರಕರಣದ ಅಡಿಯಲ್ಲಿ ಅವನ ಹೆಸರನ್ನು ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ತಪಾಸಣಾಧಿಕಾರಿಗೆ ತಿಳಿಸಿದ್ದರೆ, ಅಂಥ ಏಜೆಂಟನು, ಅಂಥ ಅಪಘಾತ ಸಂಭವಿಸಿದ ನಂತರ, ಆದಷ್ಟು ಬೇಗನೆ, ಅಪಘಾತದ ಬಗ್ಗೆ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ಪ್ರಾಧಿಕೃತ ಅಧಿಕಾರಿಗೆ ಮತ್ತು ಪೋಲೀಸ್ ಕಮೀಷನರಿಗೆ ಹಾಗೂ ಜಿಲ್ಲಾ ಮ್ಯಾಜಿಸ್ಟ್ರೇಟ್‌ಗೆ ನಿಯಮಿಸಬಹುದಾದ ಅಂಥ ನಮೂನೆ ಮತ್ತು ವಿಧಾನದಲ್ಲಿ ಪೂರ್ಣ ವಿವರಗಳ ಸಹಿತ ಸೂಚನೆಯನ್ನು ನೀಡತಕ್ಕದ್ದು. ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್ ಸ್ಥಾಪನೆಗೆ ಸಂಬಂಧಿಸಿದಂತೆ ಯಾವ ರೀತಿಯಲ್ಲಿಯೂ ಮಧ್ಯಪ್ರವೇಶಿಸತಕ್ಕದ್ದಲ್ಲ ಮತ್ತು ಈ ಸಂಬಂಧದಲ್ಲಿ ಸರ್ಕಾರವು ಪ್ರಾಧಿಕೃತಗೊಳಿಸಿದ ಅಧಿಕಾರಿಯ ಲಿಖಿತ ಅನುಮತಿಯ ಹೊರತಾಗಿ ಅಂಥ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್ ಪುನರ್ ಕಾರ್ಯಾರಂಭ ಮಾಡತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಉದ್ದೇಶಗಳಿಗಾಗಿ, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಅಳವಡಿಸಲಾಗಿರುವ ಪ್ರತಿಯೊಂದು ಕಟ್ಟಡದ ಮಾಲೀಕನು ಮತ್ತು ಅಂಥ ಮಾಲೀಕನು ಅಂಥ ಕಟ್ಟಡದಲ್ಲಿ ವಾಸವಾಗಿಲ್ಲದಿದ್ದರೆ, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್ ಕಾರ್ಯಾಚರಣೆಯಲ್ಲಿ ಯಾವುದೇ ಅಪಘಾತ ಸಂಭವಿಸಿದರೆ, ಅದರ ಬಗ್ಗೆ ತಿಳುವಳಿಕೆಯನ್ನು ನೀಡಲು ಕಟ್ಟಡವು ಇರುವ ಪಟ್ಟಣ ಅಥವಾ ಗ್ರಾಮದಲ್ಲಿ ವಾಸವಾಗಿರುವ ಒಬ್ಬ ಏಜೆಂಟನನ್ನು ನೇಮಕ ಮಾಡತಕ್ಕದ್ದು.

(3) (2)ನೇ ಉಪಪ್ರಕರಣದ ಅಡಿಯಲ್ಲಿ ನೇಮಕ ಮಾಡಲಾದ ಪ್ರತಿಯೊಬ್ಬ ಏಜೆಂಟನ ಹೆಸರನ್ನು ಪ್ರಾಧಿಕೃತ ಅಧಿಕಾರಿಗೆ ತಿಳಿಸತಕ್ಕದ್ದು.

(4) ಯಾವುದೇ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಕಾರ್ಯಾಚರಣೆಗಳಲ್ಲಿ ಯಾವುದೇ ಅಪಘಾತವು ಸಂಭವಿಸಿದಲ್ಲಿ, ಅಂಥ ಅಪಘಾತಗಳನ್ನು ಸರ್ಕಾರವು ಅಧಿಸೂಚಿಸಬಹುದಾದ ಅಂಥ ಪ್ರಾಧಿಕೃತ ಅಧಿಕಾರಿಯು ತನಿಖೆ ಮಾಡತಕ್ಕದ್ದು ಮತ್ತು ಆತನು ತನಿಖಾ ವರದಿಯನ್ನು ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಗೆ ಹಾಗೂ ಸರ್ಕಾರಕ್ಕೆ ಕಳುಹಿಸತಕ್ಕದ್ದು.

**12. ನೋಟೀಸುಗಳ, ಆದೇಶಗಳ ಅಥವಾ ದಸ್ತಾವೇಜುಗಳ ಜಾರಿ.–** (1) ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಗೆ ಕಳುಹಿಸಬೇಕೆಂದು ಅಗತ್ಯಪಡಿಸಿದ ಅಥವಾ ಪ್ರಾಧಿಕೃತಗೊಳಿಸಿದ ಪ್ರತಿಯೊಂದು ನೋಟೀಸು, ಆದೇಶ ಅಥವಾ ದಸ್ತಾವೇಜುಗಳನ್ನು ಆ ಯಾವೊಬ್ಬ ವ್ಯಕ್ತಿಗೆ ಅಂಚೆಯ ಮೂಲಕ ಜಾರಿಗೊಳಿಸಬಹುದು ಅಥವಾ,–

(i) ವಿಳಾಸದಾರನು ಸರ್ಕಾರವಾಗಿದ್ದಲ್ಲಿ, 11ನೇ ಪ್ರಕರಣದ (2)ನೇ ಉಪ ಪ್ರಕರಣದ ಅಡಿಯಲ್ಲಿ ನೇಮಕ ಮಾಡಲಾದ ಏಜೆಂಟನ ಕಚೇರಿಗೆ;

(ii) ವಿಳಾಸದಾರನು ಸ್ಥಳೀಯ ಪ್ರಾಧಿಕಾರವಾಗಿದ್ದಲ್ಲಿ, ಸ್ಥಳೀಯ ಪ್ರಾಧಿಕಾರದ ಕಚೇರಿಯಲ್ಲಿ;

(iii) ವಿಳಾಸದಾರನು ಕಂಪನಿಯಾಗಿದ್ದಲ್ಲಿ, ಕಂಪನಿಯ ನೋಂದಾಯಿತ ಕಚೇರಿಗೆ, ಅಥವಾ ಕಂಪನಿಯ ನೋಂದಾಯಿತ ಕಚೇರಿಯು ಭಾರತದಲ್ಲಿಲ್ಲದ ಸಂದರ್ಭದಲ್ಲಿ, ಭಾರತದಲ್ಲಿನ ಕಂಪನಿಯ ಮುಖ್ಯ ಕಚೇರಿಗೆ;

(iv) ವಿಳಾಸದಾರನು ಯಾವೊಬ್ಬ ಇತರ ವ್ಯಕ್ತಿಯಾಗಿದ್ದಲ್ಲಿ, ಆ ವ್ಯಕ್ತಿಯ ಸಾಮಾನ್ಯ ಅಥವಾ ಕೊನೆಯದಾಗಿ ತಿಳಿದ ವಾಸದ ಅಥವಾ ವ್ಯವಹಾರದ ಸ್ಥಳಕ್ಕೆ,

– ತಲುಪಿಸಬಹುದು.

(2) ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಯಾವುದೇ ಆವರಣಗಳ ಮಾಲೀಕನಿಗೆ ಅಥವಾ ಮಾಲೀಕನ ಏಜೆಂಟನಿಗೆ ಅಥವಾ ಅಧಿಭೋಗದಾರನಿಗೆ ಕಳುಹಿಸಲು ಅಗತ್ಯಪಡಿಸಿದ ಅಥವಾ ಅಧಿಕೃತಗೊಳಿಸಿದ ಪ್ರತಿಯೊಂದು ನೋಟೀಸು, ಆದೇಶ ಅಥವಾ ದಸ್ತಾವೇಜನ್ನು 'ಮಾಲೀಕನ' ಅಥವಾ 'ಮಾಲೀಕನ ಏಜೆಂಟನ' ಅಥವಾ 'ಆವರಣಗಳ ಅಧಿಭೋಗದಾರನ' (ಆವರಣಗಳನ್ನು ಹೆಸರಿಸುವ) ವಿವರಣೆ ಸಹಿತ ಕಳುಹಿಸಿದ್ದರೆ ಅದನ್ನು ಸರಿಯಾದ ವಿಳಾಸಕ್ಕೆ ಕಳುಹಿಸಲಾಗಿದೆ ಎಂಬುದಾಗಿ ಭಾವಿಸತಕ್ಕದ್ದು ಮತ್ತು ಅದನ್ನು ಅಥವಾ ಅದರ ನಕಲು ಪ್ರತಿಯನ್ನು ಆವರಣಗಳಲ್ಲಿನ ಯಾವೊಬ್ಬ ವ್ಯಕ್ತಿಗೆ ತಲುಪಿಸುವ ಮೂಲಕ ಅಥವಾ ಆವರಣದಲ್ಲಿ ಯಾವ ವ್ಯಕ್ತಿಯೂ ಇರದಿದ್ದರೆ ಅದನ್ನು ಯುಕ್ತ ಎಚ್ಚರಿಕೆಯಿಂದ ಆವರಣದ ಯಾವುದಾದರೂ ಎದ್ದುಕಾಣುವ ಸ್ಥಳದಲ್ಲಿ ಅಂಟಿಸುವ ಮೂಲಕ ಜಾರಿ ಮಾಡಬಹುದು.

**13. ಸರ್ಕಾರದ ಅಧಿಕಾರಗಳ ಪ್ರತ್ಯಾಯೋಜನೆ.–** (1) ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, 23ನೇ ಪ್ರಕರಣದ ಅಡಿಯಲ್ಲಿ ನಿಯಮಗಳನ್ನು ರಚಿಸುವ ಅಧಿಕಾರವನ್ನು ಹೊರತುಪಡಿಸಿ, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ತನಗೆ ಪ್ರದತ್ತವಾದ ಯಾವುವೇ ಅಧಿಕಾರಗಳನ್ನು ಅದು ಸೂಕ್ತವೆಂದು ಭಾವಿಸುವ ಅಂಥ ಅಧಿಕಾರಿಗೆ, ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಷರತ್ತುಗಳಿಗೊಳಪಟ್ಟು ಪ್ರತ್ಯಾಯೋಜಿಸಬಹುದು.

(2) ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ,–

(ಎ) ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿ;

(ಬಿ) ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ತಪಾಸಣಾಧಿಕಾರಿ,

– ಆಗಲು ಎಲೆಕ್ಟ್ರಿಕಲ್ ಇನ್ಸ್‌ಪೆಕ್ಟೊರೇಟ್ ಇಲಾಖೆಯಿಂದ ವಿದ್ಯುಚ್ಛಕ್ತಿ ಅಧಿನಿಯಮ, 2003ರ ಅಡಿಯಲ್ಲಿ ಎಲೆಕ್ಟ್ರಿಕಲ್ ಇನ್ಸ್‌ಪೆಕ್ಟರ್ ಎಂದು ಸೂಕ್ತವಾದ ವಿದ್ಯಾರ್ಹತೆಯನ್ನುಳ್ಳ ವ್ಯಕ್ತಿಗಳನ್ನು ನೇಮಕ ಮಾಡಬಹುದು.

(3) ಹಾಗೆ ನೇಮಕಗೊಂಡ ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿ ಅಥವಾ ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ತಪಾಸಣಾಧಿಕಾರಿಯು, ಅಧಿಸೂಚಿಸಬಹುದಾದ ಮತ್ತು ಸರ್ಕಾರವು ನಿರ್ದಿಷ್ಟಪಡಿಸಬಹುದಾದ ಅಂಥ ನಿರ್ಬಂಧನೆಗಳಿಗೆ ಒಳಪಟ್ಟು, ಅಂಥ ಪ್ರದೇಶದ ಒಳಗೆ ಅಥವಾ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಅಂಥ ವರ್ಗದ ಸಂಬಂಧದಲ್ಲಿ ಈ ಅಧಿನಿಯಮದ ಅಡಿಯಲ್ಲಿ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**14. ಲಿಫ್ಟ್‌ಗಳ ಅಥವಾ ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ತಪಾಸಣೆ.–** (1) ಪ್ರತಿಯೊಂದು ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು, ಸರ್ಕಾರವು ಈ ಬಗ್ಗೆ ನಿಯಮಿಸಬಹುದಾದ ಅಂಥ ಪ್ರಾಧಿಕೃತ ಅಧಿಕಾರಿ ಅಥವಾ ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ತಪಾಸಣಾಧಿಕಾರಿಯು ಅಂಥ ಅಂತರಗಳಲ್ಲಿ ತಪಾಸಣೆ ಮಾಡತಕ್ಕದ್ದು.

(2) ಅಂಥ ತಪಾಸಣೆಗಾಗಿ ವಿಧಿಸಬೇಕಾದ ತಪಾಸಣಾ ಫೀಜು ನಿಯಮಿಸಬಹುದಾದ ಅಂಥ ದರವಾಗಿರತಕ್ಕದ್ದು.

(3) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಸ್ಥಾಪಿಸಿರುವ ಕಟ್ಟಡದ ಮಾಲೀಕನು, ಪ್ರತಿ ತಿಂಗಳು ಯಾವೊಬ್ಬ ನೋಂದಾಯಿತ ವ್ಯಕ್ತಿಯ ಮೂಲಕ, ತನ್ನ ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಪರೀಕ್ಷೆ ಮಾಡಿಸತಕ್ಕದ್ದು ಮತ್ತು ನಿರ್ವಹಣೆ ಮಾಡಿಸತಕ್ಕದ್ದು ಮತ್ತು ನಿಯಮಿಸಬಹುದಾದ ಅಂಥ ಪ್ರತಿಯೊಂದು ಪರೀಕ್ಷೆಯ ಅಂಥ ವಿವರಗಳು ಒಳಗೊಂಡ ಒಂದು ರಿಜಿಸ್ಟರನ್ನು ಇಡತಕ್ಕದ್ದು ಮತ್ತು ಪ್ರಾಧಿಕೃತ ಅಧಿಕಾರಿಗೆ ಅಥವಾ ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ತಪಾಸಣಾಧಿಕಾರಿಗೆ ವಾರ್ಷಿಕ ಪರೀಕ್ಷೆ ಮತ್ತು ನಿರ್ವಹಣಾ ವರದಿಯ ಪ್ರತಿಯನ್ನು ಸಲ್ಲಿಸತಕ್ಕದ್ದು.

**15. ಲಿಫ್ಟ್‌ಗಳ ಅಥವಾ ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ನಿರ್ವಹಣೆ.–** (1) ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಪ್ರತಿಯೊಬ್ಬ ಮಾಲೀಕನು, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಶುಚಿ ಮಾಡುವುದು, ಎಣ್ಣೆ ಹಾಕುವುದು, ಸರಿಹೊಂದಿಸುವುದು ಮತ್ತು ದುರಸ್ತಿ ಮಾಡುವುದು ಸೇರಿದಂತೆ ತೃಪ್ತಿಕರ ನಿರ್ವಹಣೆಗಾಗಿ, ನೋಂದಾಯಿತ ವ್ಯಕ್ತಿಯೊಂದಿಗೆ ಒಪ್ಪಂದ ಮಾಡಿಕೊಳ್ಳತಕ್ಕದ್ದು.

(2) ವಾರ್ಷಿಕ ನಿರ್ವಹಣಾ ಒಪ್ಪಂದದಿಂದ ಅಥವಾ ಅದರ ಸಂಬಂಧದಲ್ಲಿ, ಅದರ ಅಸ್ತಿತ್ವ, ಉಲ್ಲಂಘನೆ, ಮುಕ್ತಾಯ ಅಥವಾ ಸಿಂಧುತ್ವವು ಒಳಗೊಂಡಂತೆ, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಮಾಲೀಕ ಮತ್ತು ನೊಂದಾಯಿತ ವ್ಯಕ್ತಿಯ ನಡುವೆ, ಯಾವುದೇ ತಕರಾರು, ವಿವಾದ ಅಥವಾ ಕ್ಲೇಮು ಉದ್ಭವಿಸಿದಲ್ಲಿ, ಮಧ್ಯಸ್ಥಿಕೆ ಸ್ಥಾನವು ಕರ್ನಾಟಕ ರಾಜ್ಯದಲ್ಲಿ ಇರತಕ್ಕದ್ದು.

**16. ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಲೈಸನ್ಸಿನ ಅಮಾನತು ಅಥವಾ ರದ್ದತಿ.–** ಲೈಸೆನ್ಸುದಾರನು, ಈ ಅಧಿನಿಯಮ ಅಥವಾ ನಿಯಮಗಳ ಯಾವುವೇ ಉಪಬಂಧಗಳನ್ನು ಅಥವಾ ಲೈಸೆನ್ಸಿನ ಯಾವುವೇ ಷರತ್ತುಗಳನ್ನು ಅಥವಾ ಆತನಿಗೆ ನೀಡಲಾದ ನಿರ್ದೇಶನಗಳನ್ನು ಉಲ್ಲಂಘಿಸಿದರೆ, ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಯು ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿದ ತರುವಾಯ, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಲೈಸೆನ್ಸನ್ನು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಅವಧಿಗೆ ಅಮಾನತುಗೊಳಿಸಬಹುದು ಅಥವಾ ಅದನ್ನು ರದ್ದುಗೊಳಿಸಬಹುದು.

**17. ಮೇಲ್ಮನವಿ.–** (1) ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಮಾಲೀಕ ಅಥವಾ ಏಜೆಂಟನ ಮತ್ತು ನೋಂದಾಯಿತ ವ್ಯಕ್ತಿಯ ನಡುವೆ, ಕಾಮಗಾರಿಯ ಗುಣಮಟ್ಟ ಮತ್ತು ಅಥವಾ ಬಳಸಲಾದ ವಸ್ತುವಿನ ಬಗ್ಗೆ ಯಾವುದೇ ವಿವಾದವು ಇದ್ದ ಸಂದರ್ಭದಲ್ಲಿ ಅಂಥ ವಿವಾದದ ಮೂವತ್ತು ದಿನಗಳೊಳಗೆ, ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಗೆ ಮೇಲ್ಮನವಿಯನ್ನು ಸಲ್ಲಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ, ಯಾವೊಬ್ಬ ಪ್ರಾಧಿಕೃತ ಅಧಿಕಾರಿಯ ಅಥವಾ ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ತಪಾಸಣಾಧಿಕಾರಿಯ ಯಾವುದೇ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು ಅಂಥ ಆದೇಶದ ದಿನಾಂಕದಿಂದ ಮೂವತ್ತು ದಿನಗಳೊಳಗೆ, ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಗೆ ಮೇಲ್ಮನವಿ ಸಲ್ಲಿಸಬಹುದು.

(3) ಮೇಲಿನ (1)ನೇ ಉಪಪ್ರಕರಣ ಅಥವಾ (2)ನೇ ಉಪಪ್ರಕರಣದ ಅಡಿಯಲ್ಲಿ ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಯು ಮಾಡಿದ ಅಥವಾ 6ನೇ ಪ್ರಕರಣದ ಅಡಿಯಲ್ಲಿನ ನೋಂದಣಿಯ ಸಂಬಂಧದಲ್ಲಿ ಮಾಡಿದ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಅಂಥ ಆದೇಶದ ದಿನಾಂಕದಿಂದ ಮೂವತ್ತು ದಿನಗಳೊಳಗೆ, ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ಅಂಥ ಫೀಜಿನೊಂದಿಗೆ ಸರ್ಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಬಹುದು. ಅಪೀಲಿನ ಮೇಲೆ ಸರ್ಕಾರದ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಇದನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನೆ ಮಾಡತಕ್ಕದ್ದಲ್ಲ.

(4) ಮೇಲ್ಮನವಿ ಪ್ರಾಧಿಕಾರವು, ಮೇಲ್ಮನವಿಯ ಎರಡೂ ಪಕ್ಷಕಾರರಿಗೆ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿದ ತರುವಾಯ ಮೇಲ್ಮನವಿಯನ್ನು ವಿಲೆ ಮಾಡತಕ್ಕದ್ದು ಮತ್ತು ಅದರ ಮೇಲೆ ತಾನು ಸೂಕ್ತ ಮತ್ತು ಕ್ರಮಬದ್ಧವೆಂದು ಭಾವಿಸುವ ಅಂಥ ಅದೇಶವನ್ನು ಹೊರಡಿಸತಕ್ಕದ್ದು.

**18. ಫೀಜುಗಳ ವಸೂಲಿ.–** ಈ ಅಧಿನಿಯಮದ ಅಡಿಯಲ್ಲಿ ಫೀಜುಗಳೆಂದು ಸಂದಾಯ ಮಾಡಲಾಗುವ ಎಲ್ಲ ಮೊತ್ತವನ್ನು ಭೂ ಕಂದಾಯದ ಬಾಕಿಗಳಂತೆ ವಸೂಲಿ ಮಾಡತಕ್ಕದ್ದು.

**19. ಉಲ್ಲಂಘನೆಗಳು ಮತ್ತು ದಂಡ.–** ಈ ಅಧಿನಿಯಮದ, ನಿಯಮಗಳ ಯಾವುದೇ ಉಪಬಂಧಗಳನ್ನು ಅಥವಾ ಲೈಸೆನ್ಸಿನ ಅಥವಾ ನೋಂದಣಿಯ ಷರತ್ತುಗಳನ್ನು ಅಥವಾ ಈ ಅಧಿನಿಯಮದ ಅಡಿಯಲ್ಲಿ ಸರ್ಕಾರವು ಪ್ರಾಧಿಕೃತಗೊಳಿಸಬಹುದಾದ ಅಂಥ ಅಧಿಕಾರಿಯು ನೀಡಿದ ನಿರ್ದೇಶನಗಳನ್ನು ಉಲ್ಲಂಘಿಸುವ ಯಾವೊಬ್ಬರೇ ಆಗಲಿ, ಹತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಅಥವಾ ಆರು ತಿಂಗಳವರೆಗೆ ವಿಸ್ತರಿಸಬಹುದಾದಂಥ ಸಾದಾ ಕಾರಾವಾಸದಿಂದ ಅಥವಾ ಅವೆರೆಡರಿಂದಲೂ ದಂಡಿತನಾಗತಕ್ಕದ್ದು ಹಾಗೂ ಮುಂದುವರಿದ ಉಲ್ಲಂಘನೆಯ ಸಂದರ್ಭದಲ್ಲಿ ಮುಂದುವರಿದ ಅಂಥ ಮೊದಲ ಉಲ್ಲಂಘನೆಯ ತರುವಾಯ ಅಂಥ ಉಲ್ಲಂಘನೆಯು ಮುಂದುವರೆದ ಪ್ರತಿ ದಿವಸಕ್ಕೆ ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಹೆಚ್ಚುವರಿ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**20. ಕಂಪನಿಗಳಿಂದ ಅಪರಾಧಗಳು.–** (1) ಈ ಅಧಿನಿಯಮದ ಅಡಿಯಲ್ಲಿಯ ಅಪರಾಧವನ್ನು ಮಾಡಿದ ವ್ಯಕ್ತಿಯು ಕಂಪನಿಯಾಗಿದ್ದರೆ, ಅಪರಾಧವು ನಡೆದ ಕಾಲದಲ್ಲಿ ಕಂಪನಿಯ ಪ್ರಭಾರದಲ್ಲಿದ್ದ ಮತ್ತು ಅದರ ವ್ಯವಹಾರವನ್ನು ನಡೆಸಲು ಕಂಪನಿಗೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಆ ಕಂಪನಿಯನ್ನು ಆ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ಅವನು ತನ್ನ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡನೀಯನಾಗತಕ್ಕದ್ದು:

ಪರಂತು, ಈ ಉಪಪ್ರಕರಣದಲ್ಲಿ ಒಳಗೊಂಡಿರುವ ಯಾವುದೂ, ಅಂಥ ಯಾವೊಬ್ಬ ವ್ಯಕ್ತಿಯು ಆ ಅಪರಾಧವು ತನ್ನ ತಿಳಿವಳಿಕೆಗೆ ಬಾರದೆ ನಡೆಯಿತೆಂದು ಅಥವಾ ಅಂಥ ಅಪರಾಧ ಸಂಭವಿಸುವುದನ್ನು ತಡೆಗಟ್ಟಲು ತಾನು ಎಲ್ಲ ಯುಕ್ತ ಜಾಗರೂಕತೆಯನ್ನು ವಹಿಸಿದ್ದೆನೆಂದು ರುಜುವಾತುಪಡಿಸಿದರೆ, ಈ ಅಧಿನಿಯಮದಲ್ಲಿ ಉಪಬಂಧಿಸಿದ ಯಾವುದೇ ದಂಡನೆಗೆ ಅವನನ್ನು ಗುರಿಪಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ ಅಡಿಯಲ್ಲಿ ಅಪರಾಧವನ್ನು ಒಂದು ಕಂಪನಿಯು ಮಾಡಿದ್ದರೆ ಮತ್ತು ಅಪರಾಧವು ಆ ಕಂಪನಿಯ ಯಾವೊಬ್ಬ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ನಡೆಯಿತೆಂದು ರುಜುವಾತಾದಲ್ಲಿ ಅಥವಾ ಅವನ ನಿರ್ಲಕ್ಷತೆಯಿಂದ ನಡೆಯಿತೆಂದು ಆರೋಪಿಸಬಹುದಾಗಿರುವಲ್ಲಿ, ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯು ತದನುಸಾರವಾಗಿ ವ್ಯವಹರಣೆಗೆ ಮತ್ತು ದಂಡನೆಗೆ ಗುರಿಯಾಗತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಗಳಿಗಾಗಿ,–

(ಎ) 'ಕಂಪನಿ' ಎಂದರೆ, ಒಂದು ನಿಗಮಿತ ನಿಕಾಯ ಮತ್ತು ಇದು ಒಂದು ಫರ್ಮ್‌ನ್ನು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಒಂದು ಫರ್ಮಿಗೆ ಸಂಬಂಧಿಸಿದಂತೆ 'ನಿರ್ದೇಶಕ' ಎಂದರೆ, ಆ ಫರ್ಮಿನ ಒಬ್ಬ ಪಾಲುದಾರ.

**21. ಅಪರಾಧಗಳ ಸಂಜ್ಞೇಯತೆ.–** ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿಯ ಪೂರ್ವ ಮಂಜೂರಾತಿಯಿರದ ಹೊರತು, 19ನೇ ಪ್ರಕರಣದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧದ ಸಂಜ್ಞೇಯತೆಯನ್ನು ಯಾವುದೇ ನ್ಯಾಯಾಲಯವು ತೆಗೆದುಕೊಳ್ಳತಕ್ಕದ್ದಲ್ಲ.

**22. ಸದ್ಭಾವನೆಯಿಂದ ಮಾಡಲಾದ ಕೃತ್ಯಗಳಿಗೆ ರಕ್ಷಣೆ.–** ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಸದ್ಭಾವನೆಯಿಂದ ಮಾಡಲಾದ ಅಥವಾ ಮಾಡಲು ಉದ್ದೇಶಿಸಲಾದ ಯಾವುದೇ ಕಾರ್ಯಕ್ಕೆ ಯಾವೊಬ್ಬ ಅಧಿಕಾರಿಯ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಪ್ರಾರಂಭಿಸತಕ್ಕದ್ದಲ್ಲ.

**23. ನಿಯಮಗಳನ್ನು ರಚಿಸಲು ಅಧಿಕಾರ.–** (1) ಸರ್ಕಾರವು, ಪೂರ್ವಪ್ರಕಟಣೆಯ ತರುವಾಯ, ಅಧಿಸೂಚನೆಯ ಮೂಲಕ ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸಲು ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಅಧಿಕಾರಗಳ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ, ಈ ಮುಂದಿನ ಎಲ್ಲ ಅಥವಾ ಯಾವುವೇ ವಿಷಯಗಳಿಗಾಗಿ ಅಂಥ ನಿಯಮಗಳನ್ನು ರಚಿಸಬಹುದು ಎಂದರೆ:–

(ಎ) ಲಿಫ್ಟ್‌ಗಳ ಅಥವಾ ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ತಪಶೀಲು ಪಟ್ಟಿ;

(ಬಿ) ಲಿಫ್ಟ್‌ಗಳ ಅಥವಾ ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಅಳವಡಿಕೆಯ ಯೋಜನೆಗಳನ್ನು ಸಲ್ಲಿಸತಕ್ಕ ರೀತಿ;

(ಸಿ) ಲಿಫ್ಟ್‌ಗಳ ಅಥವಾ ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳನ್ನು ಪರೀಕ್ಷಿಸುವ ರೀತಿ;

(ಡಿ) ಲಿಫ್ಟ್‌ಗಳ ಅಥವಾ ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳನ್ನು ಅಳವಡಿಸಲು ಅಥವಾ ಅದು ಕಾರ್ಯನಿರ್ವಹಿಸಲು ಲೈಸೆನ್ಸ್‌ಗಾಗಿ ಅರ್ಜಿ ನಮೂನೆ;

(ಇ) 7ನೇ ಪ್ರಕರಣದ ಅಡಿಯಲ್ಲಿ, ಲಿಫ್ಟ್‌ಗಳು ಅಥವಾ ಎಸ್ಕಲೇಟರ್‌ಗಳು ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳು ಕಾರ್ಯನಿರ್ವಹಿಸಲು ಯಾವ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು ಮತ್ತು ಯಾವ ನಮೂನೆಯಲ್ಲಿ ಲೈಸೆನ್ಸ್‌ಗಳನ್ನು ಮಂಜೂರು ಮಾಡಬಹುದೋ ಆ ನಿಬಂಧನೆಗಳು ಮತ್ತು ಷರತ್ತುಗಳು ಮತ್ತು ಆ ನಮೂನೆ;

(ಎಫ್) 11ನೇ ಪ್ರಕರಣದ ಅಡಿಯಲ್ಲಿ ಯಾವ ರೀತಿಯಲ್ಲಿ ಅಪಘಾತಗಳ ತಿಳಿವಳಿಕೆಯನ್ನು ಪತ್ರವನ್ನು ನೀಡಬೇಕೋ ಆ ರೀತಿ ಮತ್ತು ಅಂಥ ನಮೂನೆ;

(ಜಿ) 12ನೇ ಪ್ರಕರಣದ ಅಡಿಯಲ್ಲಿ ನೀಡಬೇಕಾದ ತಿಳಿವಳಿಕೆ ಪತ್ರದ ನಮೂನೆ.

(ಎಚ್) 6ನೇ ಪ್ರಕರಣದ ಅಡಿಯಲ್ಲಿ, ಲಿಫ್ಟ್‌ಗಳ ಅಥವಾ ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ, ತಯಾರಕರ ಅಥವಾ ಲಿಫ್ಟ್‌ಗಳ ಅಥವಾ ಎಸ್ಕಲೇಟರ್‌ಗಳ ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳನ್ನು ಮಾಡುವವರ ಅಥವಾ ಯಾವೊಬ್ಬ ಇತರ ವ್ಯಕ್ತಿಯು ನೊಂದಣಿಯಾಗುವ ಅಥವಾ ನೊಂದಣಿಯನ್ನು ನವೀಕರಿಸುವ ನಿಬಂಧನೆಗಳು ಮತ್ತು ಷರತ್ತುಗಳು.

(3) ಈ ಪ್ರಕರಣದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲವು ಅಧಿವೇಶನದಲ್ಲಿರುವಾಗ ಅದರ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನದಲ್ಲಿ ಅಥವಾ ಒಂದಾದಮೇಲೊಂದರಂತೆ ಅನುಕ್ರಮವಾಗಿ ಮೂವತ್ತು ದಿನಗಳ ಅವಧಿಯವರೆಗೆ ಬರುವ ಎರಡು ಅಥವಾ ಹೆಚ್ಚು ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನ ಅಥವಾ ಒಂದಾದಮೇಲೊಂದರಂತೆ ಅನುಕ್ರಮವಾಗಿಬರುವ ಅಧಿವೇಶನಗಳ ನಿಕಟೋತ್ತರ ಅಧಿವೇಶನವು ಮುಕ್ತಾಯವಾಗುವ ಮುಂಚೆ, ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮವನ್ನು ಮಾಡಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ ತರುವಾಯ ಆ ನಿಯಮವು, ಆ ಮಾರ್ಪಾಟನ್ನು ಅಥವಾ ರದ್ದಿಯಾತಿಯನ್ನು ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚಿಸಿದ ದಿನಾಂಕದಿಂದ ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ ಪರಿಣಾಮಕಾರಿಯಾಗತಕ್ಕದ್ದಲ್ಲ; ಆದಾಗ್ಯೂ ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಅಂಥ ನಿಯಮದ ಮೇರೆಗೆ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧೆಯನ್ನುಂಟುಮಾಡತಕ್ಕದ್ದಲ್ಲ.

**24. ಉಳಿಸುವಿಕೆ.–** ಈ ಅಧಿನಿಯಮದಲ್ಲಿರುವುದು ಯಾವುದೂ, ವಿದ್ಯುಚ್ಛಕ್ತಿ ಅಧಿನಿಯಮ, 2003ರ (2003ರ 36) ಅಥವಾ ಅದರ ಅಡಿಯಲ್ಲಿ ರಚಿಸಿದ ಯಾವುವೇ ನಿಯಮಗಳ ಅಥವಾ ವಿನಿಯಮಗಳ ಉಪಬಂಧಗಳಿಗೆ ಬಾಧಕವನ್ನುಂಟುಮಾಡತಕ್ಕದ್ದಲ್ಲ.

**25. ನಿರಸನ ಮತ್ತು ಉಳಿಸುವಿಕೆಗಳು.–** ಕರ್ನಾಟಕ ಲಿಫ್ಟ್‌ಗಳ ಅಧಿನಿಯಮ, 1974ನ್ನು ಈ ಮೂಲಕ ನಿರಸನಗೊಂಡಿದೆ:

ಪರಂತು, ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ, 1899ರ (1899ರ ಕರ್ನಾಟಕ ಅಧಿನಿಯಮ 3) 6ನೇ ಪ್ರಕರಣದ ಉಪಬಂಧಗಳು ಸದರಿ ಅಧಿನಿಯಮದ ನಿರಸನದ ಮೇಲೆ ಅನ್ವಯವಾಗತಕ್ಕದ್ದು ಹಾಗೂ 8 ಮತ್ತು 24ನೇ ಪ್ರಕರಣಗಳು ಸದರಿ ಅಧಿನಿಯಮವು ನಿರಸನಗೊಂಡು ಮತ್ತು ಈ ಅಧಿನಿಯಮದ ಮೂಲಕ ಪುನರ್ ಅಧಿನಿಯಮಗೊಂಡಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಕರ್ನಾಟಕ ಲಿಫ್ಟ್‌ಗಳ ಅಧಿನಿಯಮ, 1974ನ್ನು ನಿರಸನಗೊಳಿಸುವುದು ಮತ್ತು ಎಸ್ಕಲೇಟರುಗಳು, ಪ್ಯಾಸೆಂಜರ್ ಕನ್ವೇಯರ್‌ಗಳನ್ನು ಒಳಗೊಂಡಂತೆ ಲಿಫ್ಟ್‌ಗಳ ನಿರ್ಮಾಣ ಮತ್ತು ನಿರ್ವಹಣೆಯಲ್ಲಿ ನಿರತರಾಗಿರುವ ವ್ಯಕ್ತಿಗಳನ್ನು ನೋಂದಣಿ ಮಾಡಿಕೊಳ್ಳಲು ಮತ್ತು ನಿಯಂತ್ರಿಸಲು ಹಾಗೂ ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗಾಗಿ ಒಂದು ಹೊಸ ವ್ಯಾಪಕ ಕಾನೂನನ್ನು ಅಧಿನಿಯಮಿತಗೊಳಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ, ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತ ಜ್ಞಾಪನ ಪತ್ರ

**ಖಂಡ 3:** (i) (1)ನೇ ಉಪಖಂಡವು, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಅಳವಡಿಸಲು ಅಥವಾ ಸ್ಥಾಪಿಸಲು ಅನುಮತಿಯನ್ನು ಪಡೆಯುವುದಕ್ಕಾಗಿ ಸ್ಥಳದ ಮಾಲೀಕನು ಸಲ್ಲಿಸಬೇಕಾದ ಅರ್ಜಿಯ ನಮೂನೆಯ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(ii) (1)ನೇ ಉಪಖಂಡದ (9)ನೇ ಬಾಬು, ಲಿಫ್ಟ್ ಸ್ಥಾಪನೆಯ ರಚನೆಗಾಗಿಯ ಅರ್ಜಿಯ ನಮೂನೆಯಲ್ಲಿ ಇರಬೇಕಾದ ಒಳಾಂಶಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(iii) (1)ನೇ ಉಪಖಂಡದ (10)ನೇ ಬಾಬು, ಲಿಫ್ಟ್ ಸ್ಥಾಪನೆಗಾಗಿಯ ಅರ್ಜಿಯಲ್ಲಿ ನಿರ್ದಿಷ್ಟಪಡಿಸಬೇಕಾದ ಇತರ ವಿವರಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(iv) (1)ನೇ ಉಪಖಂಡದ (ಜೆ) ಬಾಬು, ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರಿನ ಸ್ಥಾಪನೆಗಾಗಿ ಅನುಮತಿಯನ್ನು ಪಡೆಯುವುದಕ್ಕಾಗಿ ಅರ್ಜಿಯಲ್ಲಿ ನಿರ್ದಿಷ್ಟಪಡಿಸಬೇಕಾದ ಇತರ ವಿವರಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(v) (2)ನೇ ಉಪಖಂಡವು, ಲಿಫ್ಟ್, ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರಿನ ಸ್ಥಾಪನೆಗಾಗಿ ಅನುಮತಿಯನ್ನು ಪಡೆಯುವುದಕ್ಕಾಗಿ ಫೀಜಿನ ಮೊತ್ತದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 4:** (i) (3)ನೇ ಉಪಖಂಡವು, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಬಳಸಲು ಲೈಸೆನ್ಸ್‌ಗಾಗಿಯ ಅರ್ಜಿ ನಮೂನೆಯ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(ii) (4)ನೇ ಉಪಖಂಡವು, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರನ್ನು ಬಳಸಲು ಲೈಸೆನ್ಸನ್ನು ಪಡೆಯುವುದಕ್ಕಾಗಿ ಅಧಿಕೃತ ಅಧಿಕಾರಿಗೆ ಸಂದಾಯ ಮಾಡಬೇಕಾದ ತಪಾಸಣಾ ಫೀಜಿನ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 5:** ಲೈಸೆಸನ್ನು ನವೀಕರಣ ಮಾಡುವುದಕ್ಕಾಗಿ ಫೀಜುಗಳ ಮೊತ್ತ ಹಾಗೂ ನಿಬಂಧನೆಗಳು ಮತ್ತು ಷರತ್ತುಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 6:** (i) (2)ನೇ ಉಪಖಂಡವು, ಲಿಫ್ಟ್‌ಗಳು, ಎಸ್ಕಲೇಟರ್‌ಗಳು ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳನ್ನು ಮಾಡುವವರನ್ನು ಅಥವಾ ತಯಾರಕರನ್ನು ಒಳಗೊಂಡಂತೆ ಯಾವೊಬ್ಬ ವ್ಯಕ್ತಿಯ ನೋಂದಣಿಗಾಗಿ ಅಥವಾ ನೋಂದಣಿಯ ನವೀಕರಣಕ್ಕಾಗಿಯ ಫೀಜುಗಳ ಮೊತ್ತ, ನಿಬಂಧನೆಗಳು ಮತ್ತು ಷರತ್ತುಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(ii) (3)ನೇ ಉಪಖಂಡವು, ಲೆಕ್ಕಪತ್ರಗಳ ಪುಸ್ತಕಗಳು, ತಂತ್ರಜ್ಞರ ಸಂಖ್ಯೆ, ಸಲ್ಲಿಸಬೇಕಾದ ವಿವರಪಟ್ಟಿಕೆಗಳು ಮತ್ತು ಒದಗಿಸಬೇಕಾದ ದಸ್ತಾವೇಜುಗಳು ಹಾಗೂ ಅಂಥ ವಿವರಪಟ್ಟಿಕೆಗಳು ಮತ್ತು ದಸ್ತಾವೇಜುಗಳನ್ನು ಸಲ್ಲಿಸಬೇಕಾದ ಅವಧಿಯ ಅಂತರಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 11:** ಅಪಘಾತದ ಪೂರ್ಣ ವಿವರಗಳ ನೋಟಿಸಿನ ನಮೂನೆ ಮತ್ತು ಅದನ್ನು ನೀಡುವ ವಿಧಾನವನ್ನು ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 14:** (i) (1)ನೇ ಉಪಖಂಡವು, ಪ್ರಾಧಿಕೃತ ಅಧಿಕಾರಿಯು ಅಥವಾ ಲಿಫ್ಟ್‌ಗಳು, ಎಸ್ಕಲೇಟರ್‌ಗಳು ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳ ತಪಾಸಣಾಧಿಕಾರಿಯು ಲಿಫ್ಟ್‌ಗಳನ್ನು ಅಥವಾ ಎಸ್ಕಲೇಟರ್‌ಗಳನ್ನು ಅಥವಾ ಪ್ಯಾಸೆಂಜರ್ ಕನ್ವೇಯರ್‌ಗಳನ್ನು ಪರಿಶೀಲನೆ ಮಾಡಬೇಕಾದ ಅವಧಿಯ ಅಂತರದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(ii) (2)ನೇ ಉಪಖಂಡವು, ತಪಾಸಣೆಗಾಗಿ ವಿಧಿಸಬೇಕಾದ ಫೀಜುಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(iii) (3)ನೇ ಉಪಖಂಡವು, ಲಿಫ್ಟ್ ಅಥವಾ ಎಸ್ಕಲೇಟರ್ ಅಥವಾ ಪ್ಯಾಸೆಂಜರ್ ಕನ್ವೇಯರ್‌ನ ಮಾಲೀಕನು ನಿರ್ವಹಿಸಬೇಕಾದ ರಿಜಿಸ್ಟರ್‌ನಲ್ಲಿ ಕೈಗೊಳ್ಳಬೇಕಾದ ಪರಿಶೀಲನೆ, ನಿರ್ವಹಣೆ ಅಥವಾ ಪರೀಕ್ಷೆಯ ವಿವರಗಳನ್ನು ದಾಖಲಿಸುವ ಮತ್ತು ಅಂಥ ಪರಿಶೀಲನೆ ಹಾಗೂ ನಿರ್ವಹಣೆಯ ವಾರ್ಷಿಕ ವರದಿಯನ್ನು ಸಲ್ಲಿಸುವ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 17:** (3)ನೇ ಉಪಖಂಡವು, ಲಿಫ್ಟ್‌ಗಳ, ಎಸ್ಕಲೇಟರ್‌ಗಳ ಮತ್ತು ಪ್ಯಾಸೆಂಜರ್ ಕನ್ವೇಯರ್‌ಗಳ ಮುಖ್ಯ ತಪಾಸಣಾಧಿಕಾರಿ ಅಥವಾ ಪ್ರಾಧಿಕೃತ ಅಧಿಕಾರಿ ಅಥವಾ ತಪಾಸಣಾಧಿಕಾರಿಯು ಮಾಡಿದ ಆದೇಶದ ಸಂಬಂಧದಲ್ಲಿ ಬಾಧಿತ ವ್ಯಕ್ತಿಯು ಸರ್ಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಬೇಕಾದ ವಿಧಾನ ಮತ್ತು ಮೇಲ್ಮನವಿಗಾಗಿ ಸಂದಾಯ ಮಾಡಬೇಕಾದ ಫೀಜುಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 23:** ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕೆ ಪೂರ್ವಪ್ರಕಟಣೆಯ ತರುವಾಯ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಶೋಭಾ ಕರಂದ್ಲಾಜೆ**
ಇಂಧನ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

## *KARNATAKA LEGISLATIVE ASSEMBLY*

### *THIRTEENTH LEGISLATIVE ASSEMBLY*

### *FIFTEENTH SESSION*

## *THE KARNATAKA LIFTS, ESCALATORS AND PASSENGER CONVEYORS BILL, 2012*

***(L.A. Bill No. 37 of 2012)***

A Bill to provide for the regulation of the construction, maintenance and safe working of certain classes of Lifts, Escalators and Passenger conveyor and all machinery and apparatus pertaining thereto in the State of Karnataka.

Whereas it is expedient to provide for the regulation of the construction, maintenance and safe working of certain classes of Lifts, Escalators and Passenger conveyor and all machinery and apparatus pertaining thereto in the State of Karnataka.

Be it enacted by the Karnataka State Legislature in the sixty-third year of the Republic of India as follows:-

***1. Short title, extent and commencement.–*** (1) This Act may be called the Karnataka Lifts, Escalators and Passenger Conveyors Act, 2012.

(2) It extends to the whole of the State of Karnataka.

(3) It shall come into force on such date as the Government may, by notification, appoint.

***2. Definitions***.- In this Act, unless the context otherwise requires,-

(a) "Authorized Officer" means Chief Inspector of Lifts, Escalators & Passenger conveyors or such other officer as may be authorized by the Government by notification;

(b) "Balustrade" means a part of the escalator/moving walk which ensures the user's safety by providing stability, protecting from moving parts and supporting the handrail;

(c) "Chief Inspector of Lifts, Escalators & Passenger conveyors" means an officer appointed as such by the Government;

(d) "Comb plate" means a platform at each landing to which the combs are attached;

(e) "Escalator" means a power driven, inclined, continuous moving stairway used for raising or lowering persons in which the user carrying surface (e.g steps) remains horizontal ;

Note: Escalators are machines which cannot be considered as fixed stair cases even when they are out of operation.

(f) "Government" means the State Government;

(g) "Inspector of Lifts, Escalators & Passenger conveyors" means an officer appointed as such by the Government;

(h) "Landing" means the portion of the building or structure which is used to receive or discharge passengers into or from a lift/escalator/ passenger conveyor;

(i) "Licence" means a licence granted under section 4;

(j) "Lift" means elevator or a hoisting mechanism equipped with a car which moves in a substantially vertical direction, is worked by power and is designed to carry passengers or goods or both;

(k) "Lift Car" means the cage or car of a lift used whether for the conveyance of passengers or goods or both and includes the floor or platform car frame, sling and enclosing body work but shall not include a hoist or lift to which the Factories Act, 1948 applies;

(l) "Lift installation" means installation of any lift including the operating mechanism of the lift, the lift car, the lift way, the way enclosure and all ropes, cables, wires and plant, directly connected with the operation of the lift;

(m) “Passenger conveyor” means Moving walk/travellator a power driven installation with endless moving walkway (e.g., pallets, belt) for the conveyance of passengers and goods either on the same or between different traffic levels;

***Note:*** Passenger conveyors (Moving walk or travellator) are machines which should not be considered as a fixed access even when they are out of operation.

(n) “Power” means any form of energy which is not generated by human or animal agency;

(o) “Rated Load” means the load at which the lift or escalator or passenger conveyor is designed and installed to operate at the rated speed;

(p) “Rated speed” means the speed at which the lift or escalator or passenger conveyor is designated to operate;

(q) “Registration” means registering of any Manufacturer or makers of lift or escalator or Passenger Conveyor or any other person intending to erect/install and/or to maintain the lift or escalator or Passenger conveyor already installed within the State of Karnataka with the Chief Inspector of Lifts, Escalators & Passenger conveyors;

(r) “Registered person” means any manufacturer or maker of lift or escalator or Passenger Conveyor or any other person intending to erect or install and/or to maintain the lift or escalator or Passenger conveyor already installed within the State of Karnataka registered with the Chief Inspector of Lifts, Escalators & Passenger conveyors;

(s) “Travel (Rise)” means the vertical distance between the bottom terminal landing and the top terminal landing of a lift/ escalator/ passenger conveyor.

***3. Permission to erect or install a lift / escalator / passenger conveyor.-*** (1) Every owner of a place intending to erect or install a lift or an escalator or a passenger conveyor in such a place after the commencement of this Act, shall make an application to such officer as the Government may authorize by a notification in this behalf for permission to erect such lift or escalator or passenger conveyor. Such application shall be in writing and in such form as may be prescribed. Such application shall specify,–

***A. Lift Installation:***

(1) The type of the lift;

(2) The rated maximum speed of the lift designed to operate;

(3) The maker’s or designer’s rated capacity in weight;

(4) The maximum number of passengers in addition to the lift operator which the lift can carry;

(5) The total weight of the lift car carrying the maximum load;

(6) The weight of the counter weight;

(7) The number, description, weight and size of the supporting cables;

(8) The depth of the pit from the lowest part of the lift car when at the lowest floor;

(9) Such details of the construction of the overhead arrangement with weight and sizes of the beams as may be prescribed; and

(10) Such other particulars as may be prescribed.

***B. Escalator or passenger conveyor Installation:***

(a) The type of the escalator or passenger conveyor;

(b) The speed at which the escalator/passenger conveyor is designated to operate;

(c) Angle of inclination;

(d) The width between balustrades;

(e) Details of handrails, step treads, landing comb plates, trusses or girders and step wheel tracks;

(f) The rated load in kilogramme;

(g) The number of persons per hour with rated load;

(h) The factor of safety based on the static loads in the escalator or passenger conveyor ;

(i) Travel Rise in metre; and

(j) Such other particulars as may be prescribed.

(2) Every application for issue of erection or installation permission shall be accompanied by such fee as may be prescribed.

(3) On receipt of such application along with fee paid treasury challan, the authorized officer shall, after making such enquiry and requiring the applicant to furnish such information as may be necessary and may thereupon either grant or refuse to grant the permission to erect or install lift or escalator or passenger conveyor. Such permission shall be valid only for a period of twelve months from the date on which it is granted.

(4) In case if the erection of lift or escalator or passenger conveyor is not completed within the period of validity of permission, the same shall be got renewed by submitting the application afresh.

(5) No person, who is also the owner of lift or escalator or passenger conveyor, shall get his lift or escalator or passenger conveyor erected or installed without getting erection or installation permission from the authorized officer.

(6) No person, who is the owner of lift or escalator or passenger conveyor, shall get his lift or escalator or passenger conveyor erected by the manufacturer or maker of lift or escalator or passenger conveyor or any other person other than those who is registered with the Chief Inspector of Lifts, Escalators & Passenger conveyors.

***4. Licence to use a lift or escalator or passenger conveyor.-*** (1) Every owner of a place, who is permitted to erect a lift or escalator or passenger conveyor under section 3, shall get his lift or escalator or passenger conveyor installed as per the existing relevant code of practices of Bureau of Indian Standard and Central Electricity Authority (Measures relating to Safety and Electric Supply) Regulations, 2010. All materials and apparatus used shall confirm to the relevant specifications of the Bureau of Indian Standards or International Electro –Technical Commission where such specifications have already been laid down.

(2) Every owner of a place who is permitted to erect a lift or escalator or passenger conveyor under section 3, shall, within one month after the completion of the erection of such lift or escalator or passenger conveyor, deliver or send or cause to be delivered or sent to the authorized officer, a notice in writing of such completion and shall make an application to him for a licence for working or use of the lift or escalator or passenger conveyor as the case may be.

(3) Application for a licence made under sub-section (1) shall be in such form as may be prescribed.

(4) The inspection fee as may be prescribed by the Government shall be paid along with such application.

(5) On receipt of such application along with prescribed fee paid challan, the authorized officer after making such enquiry and inspection as may be necessary, forward the recommendation with his remarks to the Chief Inspector of Lifts, Escalators & Passenger conveyors. The Chief Inspector of Lifts, Escalators & Passenger Conveyors, thereupon, either grant subject to conditions specified in this Act or rules made thereunder or refuse to grant the licence for the reasons to be recorded in writing:

Provided that where the Chief Inspector of Lifts, Escalators & Passenger conveyors refuses to grant the licence, shall give a reasonable opportunity of being heard to the applicant.

(6) Except for the purpose of tests, supply of electricity shall not be arranged to the lift or escalator or passenger conveyor without obtaining the licence from the Chief Inspector of Lifts, Escalators & Passenger conveyors.

(7) No person who is the owner or erector of the lift or escalator or passenger conveyor shall use the lift or escalator or passenger conveyor without obtaining the licence from the Chief Inspector of Lifts, Escalators & Passenger conveyors.

***5. Duration of licence.-*** Unless any addition or alteration is made to the lift or escalator or passenger conveyor, every licence shall be valid for a period of ten years from the date on which it is granted. Before the expiry of the period of licence, the licence shall be got renewed. The licence may be renewed for a further period of every five years on an application along with such fee and subject to such conditions as may be prescribed.

***6. Registration of Lift or Escalator or Passenger Conveyor manufacturer or maker or other person.-*** (1) No person shall engage in the business of erection or installation or periodical testing and maintenance of lift or escalator or passenger conveyor, as the case may be, unless he gets registered himself or has got renewed his registration with the Chief Inspector of Lifts, Escalators & Passenger conveyors.

(2) The Chief Inspector of Lifts, Escalators & Passenger conveyors may register or after such interval of time as may be prescribed renew registration of any person including manufacturer or maker of Lift or Escalator or Passenger Conveyor intending to erect or to undertake periodical testing or maintenance, as the case may be, on an application along with such fee and subject to such terms and conditions as may be prescribed or may refuse to register or to renew registration for the reasons to be recorded in writing.

(3) Every person registered under sub-section (1) shall maintain such books of accounts, such number of technicians, installation, erection and testing instruments etc. and submit such returns and produce such documents as required at such intervals as may be prescribed to the authorized officer.

(4) No person including a manufacturer or maker of lift, escalator or passenger conveyor shall erect or install a Lift or escalator or passenger Conveyor before permission is granted under section 3 of the Act.

(5) Every Lift or Escalator or Passenger Conveyor manufacturer or maker or any other person as the case may be, who engages in the erection or installation of lift or escalator or passenger conveyor, shall not let a Lift or Escalator or Passenger Conveyor for usage before ensuring license to use the Lift or Escalator or Passenger Conveyor, is granted under section 4 of the Act.

***7. Lift or escalator or passenger conveyor not to be operated without a licence.-*** Subject to such rules as may be made in this behalf, no lift or escalator or passenger conveyor shall be used or worked, except under and in conformity with the terms of the licence granted in respect of the same.

***8. Additions and alterations to the lift or escalator or passenger conveyor installation.-*** No additions or alterations other than those required to be made under sub-section (1) of section 15, shall be made to any lift or escalator or passenger conveyor installation as the case may be, except with the previous permission in writing of the authorized officer.

***9. Right to enter any building for inspection of Lifts or Escalators or Passenger Conveyors installation.-*** (1) The authorized officer or the Inspector of Lifts, Escalators & Passenger Conveyors may at any time after giving reasonable notice to the occupant enter upon any building in which a lift or escalator or passenger conveyor, is installed or is being installed or in connection with which an application for a licence has been received or otherwise for the purpose of inspecting the lift or escalator or passenger conveyor installation or the site thereof.

(2) If on such inspection, the authorized officer or the Inspector of Lifts, Escalators & Passenger Conveyors is of the opinion that any lift or escalator or passenger conveyor in any building is in an unsafe condition, he may issue an order, on the owner of the building or his agent appointed under sub-section (2) of section 11 requiring such repairs or alterations to be made to such lift or escalator or passenger conveyor as he may deem necessary within the time specified therein and may also, if necessary, order the use of such lift or escalator or passenger conveyor to be discontinued until such repairs or alterations are made or such unsafe conditions are removed.

(3) Notwithstanding any appeal made under sub-section (2) of section 17, any order to discontinue the use of a lift or escalator or passenger conveyor made by the authorised officer or Inspector of lifts or Escalator or passenger conveyor under sub-section (2) of this section shall be complied with unless the Appellate Authority has reversed such order.

***10. Owner to give facilities for inspection of Lifts or Escalators or Passenger Conveyors.-*** (1) The owner of a building in which a lift or escalator or passenger conveyor is installed or his agent appointed under sub-section (2) of section 11, shall afford all reasonable facilities to the authorized officer or the Inspector of Lifts, Escalators & Passenger Conveyors for inspecting a lift or escalator or passenger conveyor as the case may be and whenever ordered to do so by the authorized officer or the Inspector of Lifts, Escalators & Passenger Conveyors shall, at his own cost, procure at such inspection, the attendance of the person, if any, with whom he has entered into a contract for the erection or maintenance of the lift or escalator or passenger conveyor or a representative of such person who is competent to guide the authorized officer or the Inspector of Lifts, Escalators & Passenger Conveyors in inspecting the lift or escalator or passenger conveyor.

(2) The owner or his agent as the case may be, shall comply with the order within the period specified therein and shall forthwith report in writing to the authorized officer of having so complied.

***11. Report of Accidents.–*** (1) Where any accident occurs in the operations of any lift or escalator or passenger conveyor which results or was likely to result in injury to any person, the owner of the building in which the lift or escalator or passenger conveyor is working or if such owner has appointed an agent and has communicated his name to the Inspector of Lifts, Escalators & Passenger conveyors under sub-section (3), such agent shall, as soon as may be, after such accident give notice with full details of the accident to the authorized officer and also to the Commissioner of Police and the District Magistrate in such form and manner as may be prescribed. The lift or escalator or passenger conveyor installation shall not be interfered within any way and the working of such lift or escalator or passenger conveyor shall not be resumed except with the written permission of the Chief Inspector of Lifts, Escalators & Passenger conveyors.

(2) For the purposes of sub-section (1), the owner of every building in which a lift or escalator or passenger conveyor has been installed may, and if such owner does not reside in such building shall, appoint an agent who shall be a resident in the town or village in which the building situated, to give notice of any accident occurring in the operation of the lift or escalator or passenger conveyor.

(3) The name of every agent appointed under sub-section (2), shall be communicated to the authorized officer.

(4) Where any accident occurs in the operations of any lift or escalator or passenger conveyor, such accidents shall be investigated by such authorised officer as may be notified by the Government and he shall forward the investigation report to the Chief Inspector of Lifts, Escalators & Passenger conveyors and to the Government.

***12. Service of notices, orders or documents.-*** (1) Every notice, order or document by or under this Act required or authorized to be addressed to any person may be served by post or left,-

(i) where a Government is the addressee, at the office of the agent appointed under sub-section (2) of section 11;

(ii) where a local authority is the addressee, at the office of the local authority;

(iii) where a company is the addressee, at the registered office of the company or in the event of the registered office of the company not being in India, at the head office of the company in India ;

(iv) where any other person is the addressee, at the usual or last known place of abode or business of the person.

(2) Every notice, order or document by or under this Act required be authorized to be addressed to the owner or the agent of the owner, or the occupant of any premises shall be deemed to be properly addressed if addressed by the description of the 'owner' or 'agent of the owner' 'occupant of the premises' (naming the premises) and may be served by delivering it or a true copy thereof, to some person on the premises, or, if there is no person on the premises to whom the same can with reasonable diligence be delivered, by affixing it on some conspicuous part of the premises.

***13. Delegation of powers of Government.–*** (1) The Government may, by order, published in the official Gazette, delegate any of the powers conferred on it, by or under this Act other than the power to make rules under section 23, subject to such conditions as may be specified in the order, to such officer as it thinks fit.

(2) The Government may, by notification in the official Gazette, appoint persons duly qualified as Electrical Inspector under the Electricity Act, 2003 from the Department of Electrical Inspectorate to be,-

(A) the Chief Inspector of Lifts, Escalators & Passenger conveyors;

(B) the Inspector of Lifts, Escalators & Passenger conveyors.

(3) The Chief Inspector of Lifts, Escalators & Passenger conveyors or the Inspector of Lifts, Escalators & Passenger conveyors so appointed shall exercise the powers and perform the functions under this Act within such areas or in respect of such class of lift or escalator or passenger conveyor as may be notified and subject to such restrictions as the Government may specify.

***14. Inspection of Lifts or Escalators or Passenger Conveyors.–*** (1) Every lift or escalator or passenger conveyor shall be inspected at such intervals, by such authorized officer or the Inspector of Lifts, Escalators & Passenger conveyors, as may be prescribed in this behalf by the Government.

(2) Inspection fee charged for such inspection shall be at such rate as may be prescribed.

(3) Notwithstanding anything contained in sub-section (1), the owner of a building in which Lift or Escalator or Passenger conveyor is installed, shall get his Lift or Escalator or Passenger conveyor, tested and maintained by any registered person every month, and a register shall be kept containing such particulars of every such examination as may be prescribed and shall submit copy of annual testing and maintenance report to the authorized officer or the Inspector of Lifts, Escalators & Passenger conveyors.

***15. Maintenance of lifts or escalator or passenger conveyors.-*** (1) Every owner of lift or escalator or passenger conveyor shall enter into a contract with the registered person, for the satisfactory maintenance, including cleaning, oiling, adjusting and repairing of the lift or escalator or passenger conveyor.

(2) Any dispute, controversy or claim between the owner of lift or escalator or passenger conveyor and registered person, arises out of or in connection with annual maintenance contract, including the existence, breach, termination or validity thereof, the seat of arbitration shall be in the State of Karnataka.

***16. Suspension or cancellation of licence of lift or escalator or passenger conveyor.-*** If the licensee has contravened any of the provisions of the Act or rules or any of the conditions of the licence or directions given to him, the Chief Inspector of Lifts, Escalators & Passenger conveyors, may after giving reasonable opportunity of being heard, suspend or cancel the licence of lift or escalator or passenger conveyor for such period as he thinks fit or cancel it.

***17. Appeal.-*** (1) In case of any dispute between owner or agent of lift or escalator or passenger conveyor, and the registered person with regards to quality of work and or material used may appeal to the Chief Inspector of Lifts, Escalators & Passenger conveyors within thirty days of such dispute.

(2) Any person aggrieved by an order of any authorized officer or Inspector of Lifts, Escalators & Passenger conveyors under this Act, may within thirty days from the date of such order, appeal to the Chief Inspector of Lifts, Escalators & Passenger conveyors.

(3) Any person aggrieved by the order made by Chief Inspector of Lifts, Escalators & Passenger conveyors under sub-section (1) or sub-section (2) above or regarding registration under section 6, within thirty days from the date of such order, may appeal to the Government in such manner along with such fee as may be prescribed. The decision of the Government on appeal shall be final and shall not be called in question in any court.

(4) The Appellate Authority shall dispose of the Appeal, after giving both parties to the appeal a reasonable opportunity of being heard and pass such orders thereon as it thinks fit and proper.

***18. Recovery of fees.-*** All sums payable as fees under this Act shall be recoverable as arrears of land revenue.

ನೋಂದಣಿಯನ್ನು ರದ್ದುಗೊಳಿಸಿದ ತರುವಾಯ, ಅಂಥ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿದಲ್ಲಿ ಅಥವಾ ನಿರ್ವಹಿಸಿದಲ್ಲಿ ಅಥವಾ ನಡೆಸಿಕೊಂಡು ಬಂದಲ್ಲಿ, ಅಪರಾಧ ನಿರ್ಣಯವಾದ ತರುವಾಯ ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಆದರೆ, ಆರು ತಿಂಗಳಿಗಿಂತ ಕಡಿಮೆಯಲ್ಲದ ಅವಧಿಯ ಕಾರಾವಾಸದಿಂದ ಹಾಗೂ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಆದರೆ, ಒಂದು ಸಾವಿರ ರೂಪಾಯಿಗೆ ಕಡಿಮೆಯಲ್ಲದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**39. 27ನೇ ಪ್ರಕರಣವನ್ನು ಉಲ್ಲಂಘಿಸಿ ಹಣ ಸಂಗ್ರಹಿಸುವುದಕ್ಕಾಗಿ ದಂಡನೆ.–** 27ನೇ ಪ್ರಕರಣದ (3)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ಯಾವುದೇ ಶಿಕ್ಷಣ ಸಂಸ್ಥೆಯು, ಹಣ ಸಂಗ್ರಹಿಸುತ್ತಿರುವುದಾಗಿ ಕಂಡುಬಂದಲ್ಲಿ, ಅಂಥ ಸಂಗ್ರಹಣೆಯ ಕಾಲದಲ್ಲಿ ಸಂಸ್ಥೆಯ ಆಡಳಿತ ಪ್ರಭಾರವನ್ನು ಹೊಂದಿದ್ದ ಮತ್ತು ಆ ಬಗ್ಗೆ ಅದಕ್ಕೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯು, ಅಪರಾಧ ನಿರ್ಣಯವಾದ ತರುವಾಯ ಆರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು. ಅಪರಾಧ ನಿರ್ಣಯವಾದ ತರುವಾಯ ಯಾರಿಂದ ಹಣ ಸಂಗ್ರಹಿಸಿತ್ತೋ ಅಂಥ ವ್ಯಕ್ತಿಗೆ ಹಾಗೆ ಸಂಗ್ರಹಿಸಿದ ಹಣವನ್ನು ಸಂಸ್ಥೆಯು ಮರು ಸಂದಾಯ ಮಾಡತಕ್ಕದ್ದು.

**40. ಆಡಳಿತ ಪರಿಷತ್ತು ನಡತೆ ಸಂಹಿತೆಯನ್ನು ಉಲ್ಲಂಘಿಸಿದ್ದಕ್ಕಾಗಿ ದಂಡನೆ.–** ಯಾವುದೇ ಆಡಳಿತ ಪರಿಷತ್ತು, 33ನೇ ಪ್ರಕರಣದಲ್ಲಿ ನಿಯಮಿಸಲಾದ ಯಾವುದೇ ನಡತೆ ಸಂಹಿತೆಯನ್ನು ಉದ್ದೇಶಪೂರ್ವಕವಾಗಿ ಅಥವಾ ತಿಳಿದೂ ತಿಳಿದೂ ಉಲ್ಲಂಘಿಸಿದಲ್ಲಿ, ಈ ಅಧಿನಿಯಮದ ಮತ್ತು ಅದರ ಅಡಿಯಲ್ಲಿ ರಚಿತವಾದ ನಿಯಮಗಳ ಅಡಿಯಲ್ಲಿ ಕೈಗೊಳ್ಳಬಹುದಾದ ಯಾವುದೇ ಇತರ ಕ್ರಮಕ್ಕೆ ಬಾಧಕವಾಗದಂತೆ, ಅಪರಾಧ ನಿರ್ಣಯವಾದ ತರುವಾಯ ಅದರ ಪ್ರತಿಯೊಬ್ಬ ಸದಸ್ಯನು ಅಂಥ ಪ್ರತಿಯೊಂದು ಉಲ್ಲಂಘನೆಗಾಗಿ ಐದು ನೂರು ರೂಪಾಯಿಗೆ ಮೀರದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**41. ಸಂಸ್ಥೆಗಳನ್ನು ಮುಚ್ಚುವ ಬಗ್ಗೆ ನೋಟೀಸನ್ನು ಕೊಡಲು ತಪ್ಪಿರುವುದಕ್ಕಾಗಿ ದಂಡನೆ.–** ಯಾವುದೇ ಖಾಸಗಿ ಶಿಕ್ಷಣ ಸಂಸ್ಥೆಯ ಆಡಳಿತ ಪರಿಷತ್ತು, 36ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ಅಗತ್ಯಪಡಿಸಲಾಗಿರುವ ನೋಟೀಸನ್ನು ಕೊಡಲು ತಪ್ಪಿದಲ್ಲಿ ಅದರ ಪ್ರತಿಯೊಬ್ಬ ಸದಸ್ಯನು ಅಪರಾಧ ನಿರ್ಣಯವಾದ ನಂತರ, ಎರಡು ತಿಂಗಳವರೆಗೆ ವಿಸ್ತರಿಸಬಹುದಾದ ಸಾದಾ ಕಾರಾವಾಸದಿಂದ ಅಥವಾ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ಮತ್ತು ಹಾಗೆ ತಪ್ಪು ಮಾಡಿದ ಪ್ರತಿ ದಿನಕ್ಕೆ ಐವತ್ತು ರೂಪಾಯಿ ಜುಲ್ಮಾನೆಯಿಂದಲೂ ದಂಡಿತನಾಗತಕ್ಕದ್ದು.

**42. ಅಪರಾಧದ ಬಗ್ಗೆ ಉಪಬಂಧಿಸಿರದ ಜುಲ್ಮಾನೆಗಳು.–** ಈ ಅಧಿನಿಯಮದಲ್ಲಿ ಒಳಗೊಂಡಿರುವ ಈ ಮೊದಲಿನ ಉಪಬಂಧಗಳ ಅಡಿಯಲ್ಲಿ ದಂಡನೀಯವಾದುವುಗಳನ್ನು ಹೊರತುಪಡಿಸಿ, ಯಾವೊಬ್ಬ ವ್ಯಕ್ತಿಯು ಯಾವುದೇ ಇತರ ನಿಯಮಗಳನ್ನು ಉಲ್ಲಂಘಿಸುವ ಅಥವಾ ಉಲ್ಲಂಘಿಸಲು ಯತ್ನಿಸುವ ಅಥವಾ ಉಲಂಘಿಸಲು ದುಷ್ಪ್ರೇರಿಸುವ ಯಾವೊಬ್ಬ ವ್ಯಕ್ತಿಯು, ಅಪರಾಧ ನಿರ್ಣಯವಾದ ತರುವಾಯ ಅಂಥ ಪ್ರತಿಯೊಂದು ಉಲ್ಲಂಘನೆಗಾಗಿ ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ಈ ಅಧಿನಿಯಮ ಅಥವಾ ನಿಯಮಗಳನ್ನು ಉಲ್ಲಂಘಿಸುವ ಅವಧಿಯಲ್ಲಿ ಅಪರಾಧವು ಮುಂದುವರೆದಿರುವ ಅವಧಿಯಲ್ಲಿ ಒಂದು ನೂರು ರೂಪಾಯಿಗಳಿಗೆ ಮೀರದ ಜುಲ್ಮಾನೆಯನ್ನು ವಿಧಿಸತಕ್ಕದ್ದು.

**43. ಕಂಪನಿಗಳಿಂದ ಅಪರಾಧಗಳು.–** (1) ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಲಾದ ಯಾವುದೇ ನಿಯಮದ ಯಾವುದೇ ಉಪಬಂಧಗಳ ವಿರುದ್ಧ ಕಂಪನಿಯು ಅಪರಾಧವನ್ನು ಮಾಡಿರುವಲ್ಲಿ, ಆ ಅಪರಾಧವು ನಡೆದ ಕಾಲದಲ್ಲಿ, ಕಂಪನಿಯ ಆಡಳಿತದ ಪ್ರಭಾರವನ್ನು ಹೊಂದಿದ್ದ, ಮತ್ತು ಅದರ ವ್ಯವಹಾರಗಳನ್ನು ನಡೆಸುವ ಬಗ್ಗೆ ಕಂಪನಿಗೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಆ ಕಂಪನಿಯನ್ನು ಆ ಅಪರಾಧದ ಬಗ್ಗೆ ತಪ್ಪಿತಸ್ಥರೆಂದು ಭಾವಿಸತಕ್ಕುದು ಮತ್ತು ಅವರು ತಮ್ಮ ವಿರುದ್ಧ ಕೈಗೊಳ್ಳಲಾಗುವ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತನಾಗತಕ್ಕದ್ದು:

ಪರಂತು, ಈ ಉಪಪ್ರಕ ಣದಲ್ಲಿರುವುದು ಯಾವುದೂ, ಆ ಅಪರಾಧವು ತನ್ನ ತಿಳುವಳಿಕೆಗೆ ಬಾರದೆ ನಡೆಯಿತೆಂದು ಅದನ್ನು ತಡೆಗಟ್ಟಲು ತಾನು ಎಲ್ಲ ಯುಕ್ತ ಜಾಗರೂಕತೆ ವಹಿಸಿದ್ದನೆಂದು ಅಂಥ ಯಾವೊಬ್ಬ ವ್ಯಕ್ತಿಯು ರುಜುವಾತುಪಡಿಸಿದರೆ, ಅವನನ್ನು ಯಾವುದೇ ದಂಡನೆಗೆ ಗುರಿಪಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, ಯಾವುದೇ ಅಂಥ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ, ಮತ್ತು ಆ ಅಪರಾಧವು ಆ ಕಂಪನಿಯ ಯಾವೊಬ್ಬ ನಿರ್ದೇಶಕನ ಅಥವಾ ವ್ಯವಸ್ಥಾಪನ, ಕಾರ್ಯದರ್ಶಿಯ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ನಡೆಯಿತೆಂದು ರುಜುವಾತಾದರೆ ಅಥವಾ ಆ ಅಪರಾಧವು ಅವರ ಯಾವುದೇ ನಿರ್ಲಕ್ಷ್ಯತೆಯಿಂದ ಆಗಿದೆಯೆಂದು ಆರೋಪಿಸಬಹುದಾದರೆ, ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯನ್ನು ಆ ಅಪರಾಧದ ಬಗ್ಗೆ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ಅದಕ್ಕನುಸಾರವಾಗಿ ಅವನ ವಿರುದ್ಧ ಕೈಗೊಳ್ಳಲಾಗುವ ವ್ಯವಹರಣೆಗಳಿಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತನಾಗತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಗಳಿಗಾಗಿ,-

(ಎ) ಕಂಪನಿ ಎಂದರೆ, ಯಾವುದೇ ನಿಗಮಿತ ನಿಕಾಯ ಮತ್ತು ಇದು ನ್ಯಾಸ, ಫರ್ಮು, ಸಂಘ ಅಥವಾ ವ್ಯಕ್ತಿಗಳ ಇತರ ಸಂಸ್ಥೆ – ಇವುಗಳನ್ನು ಒಳಗೊಳ್ಳುತ್ತದೆ; ಮತ್ತು

(ಬಿ) (i) ಫರ್ಮಿಗೆ ಸಂಬಂಧಿಸಿದಂತೆ "ನಿರ್ದೇಶಕ" ಎಂದರೆ, ಆ ಫರ್ಮಿನ ಪಾಲುದಾರ;

(ii) ಸಂಘ, ನ್ಯಾಸ ಅಥವಾ ವ್ಯಕ್ತಿಗಳ ಇತರ ಸಂಸ್ಥೆಗಳ ಸಂಬಂಧದಲ್ಲಿ ನಿರ್ದೇಶಕ ಎಂದರೆ, ಸಂಘದ, ನ್ಯಾಸದ ಅಥವಾ ಇತರ ಸಂಸ್ಥೆಯ ನಿಯಮಗಳ ಅಡಿಯಲ್ಲಿ, ಸಂಘದ, ನ್ಯಾಸದ ಅಥವಾ ಸಂದರ್ಭಾನುಸಾರ ಇತರ ಸಂಸ್ಥೆಯ ಆಡಳಿತ ನಿರ್ವಹಣೆಯ ಕಾರ್ಯವನ್ನು ವಹಿಸಿ ಕೊಡಲಾಗಿರುವ ವ್ಯಕ್ತಿ.

**44. ಈ ಅಧಿನಿಯಮದ ಅಡಿಯಲ್ಲಿ ಅಧಿಕಾರಗಳನ್ನು ಚಲಾಯಿಸುವ ಅಧಿಕಾರಿಗೆ ಅಥವಾ ಇನ್ನಿತರ ವ್ಯಕ್ತಿಗೆ ಅಡ್ಡಿಯುಂಟು ಮಾಡಿದ್ದಕ್ಕೆ ದಂಡನೆ.–** ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಸರ್ಕಾರದ ಅಧಿಕಾರಿಗೆ ಪ್ರದತ್ತವಾದ ಅಧಿಕಾರವನ್ನು ಆ ಅಧಿಕಾರಿಯು ಚಲಾಯಿಸುವಾಗ ಅಥವಾ ಆ ಅಧಿಕಾರಿಗೆ ಒಪ್ಪಿಸಿರುವ ಪ್ರಕಾರ್ಯವನ್ನು ಆ ಅಧಿಕಾರಿಯು ನಿರ್ವಹಿಸುವಾಗ ಅಥವಾ ಅಂಥ ಅಧಿಕಾರವನ್ನು ಚಲಾಯಿಸಲು ಅಥವಾ ಅಂಥ ಪ್ರಕಾರ್ಯವನ್ನು ನಿರ್ವಹಿಸಲು ಅಂಥ ಅಧಿಕಾರಿಗೆ ಕಾನೂನು ಸಮ್ಮತವಾಗಿ ನೆರವಾಗುತ್ತಿರುವ ಯಾವೊಬ್ಬ ಇತರ ವ್ಯಕ್ತಿಗೆ ಅಡ್ಡಿಯುಂಟು ಮಾಡುವ ಯಾವೊಬ್ಬ ವ್ಯಕ್ತಿಯು ಅಥವಾ ಆ ಅಧಿಕಾರಿಯು ಅಥವಾ ಆ ವ್ಯಕ್ತಿಯು ಕಾನೂನು ಸಮ್ಮತವಾಗಿ ನೀಡಿದ ನಿರ್ದೇಶನಗಳನ್ನು ಪಾಲಿಸಲು ತಪ್ಪಿದ ಯಾವೊಬ್ಬ ವ್ಯಕ್ತಿಯು ಎರಡು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**45. ರಕ್ಷಣೆ.–** ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಅಡಿಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕೃತ್ಯಕ್ಕಾಗಿ ರಾಜ್ಯ ಸರ್ಕಾರದ ಅಥವಾ ಯಾವುದೇ ಪ್ರಾಧಿಕಾರದ, ಅಧಿಕಾರಿಯ ಅಥವಾ ನೌಕರನ ವಿರುದ್ಧ ಯಾವುದೇ ದಾವೆಯನ್ನು, ಪ್ರಾಸಿಕ್ಯೂಷನ್ ಅನ್ನು ಅಥವಾ ಇತರ ವ್ಯವಹರಣೆಗಳನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

**46. ತನಿಖೆ ಹಾಗೂ ಅಪರಾಧಗಳ ಸಂಜ್ಞಾನ.–** ಯಾವುದೇ ನ್ಯಾಯಾಲಯವು, ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧದ ಬಗ್ಗೆ ಅಥವಾ ಅಂಥ ಯಾವುದೇ ಅಪರಾಧದ ದುಷ್ಪ್ರೇರಣೆಯ ಬಗ್ಗೆ ಸಕ್ಷಮ ಪ್ರಾಧಿಕಾರವು ನೀಡಿದ ದೂರಿನ ಮೇಲೆ ಹೊರತು ಅಥವಾ ಆ ಪ್ರಾಧಿಕಾರದ ಪೂರ್ವ ಮಂಜೂರಾತಿಯನ್ನು ಪಡೆದ ಹೊರತು ಸಂಜ್ಞಾನವನ್ನು ತೆಗೆದುಕೊಳ್ಳತಕ್ಕದ್ದಲ್ಲ.

**47. ಅಪರಾಧಗಳ ದುಷ್ಪ್ರೇರಣೆಗಾಗಿ ದಂಡನೆ.–** ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧ ಮಾಡುವಂತೆ ಪ್ರಚೋದಿಸುವ ಅಥವಾ ದುಷ್ಪ್ರೇರಿಸುವ ಯಾವೊಬ್ಬ ವ್ಯಕ್ತಿಯು, ಅಪರಾಧ ನಿರ್ಣಯವಾದ ತರುವಾಯ, ಅಂಥ ಅಪರಾಧಕ್ಕಾಗಿ ಉಪಬಂಧಿಸಲಾಗಿರುವ ದಂಡನೆಯಿಂದ ದಂಡಿತನಾಗತಕ್ಕದ್ದು.

## ಅಧ್ಯಾಯ - X

## ಪ್ರಾಧಿಕಾರದ ನಿಧಿ

**48. ಪ್ರಾಧಿಕಾರದ ನಿಧಿ.–** (1) ಪ್ರಾಧಿಕಾರದ ನಿಧಿ ಎಂದು ಕರೆಯಲಾಗುವ ಒಂದು ನಿಧಿಯು ಇರತಕ್ಕದ್ದು.

(2) ಈ ಮುಂದಿನವುಗಳು ಪ್ರಾಧಿಕಾರದ ನಿಧಿಯ ಭಾಗವಾಗತಕ್ಕದ್ದು ಅಥವಾ ಅದಕ್ಕೆ ಸಂದಾಯವಾಗತಕ್ಕದ್ದು ಎಂದರೆ:–

(i) ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಯಾವುದೇ ಸ್ಥಳೀಯ ಪ್ರಾಧಿಕಾರ, ನಿಗಮಿತವಾಗಿರುವ ಅಥವಾ ನಿಗಮಿತವಾಗಿಲ್ಲದಿರುವ ಯಾವುದೇ ನಿಕಾಯ ಅಥವಾ ಯಾವೊಬ್ಬ ವ್ಯಕ್ತಿಯು ನೀಡಿದ ಎಲ್ಲ ಅನುದಾನಗಳು, ಧನ ಸಹಾಯಗಳು, ದೇಣಿಗೆಗಳು ಮತ್ತು ದಾನಗಳು;

(ii) ಯಾವುದೇ ಮೂಲದಿಂದಾಗಲಿ ಪ್ರಾಧಿಕಾರದಿಂದ ಅಥವಾ ಪ್ರಾಧಿಕಾರದ ಪರವಾಗಿ ಸ್ವೀಕರಿಸಲಾದ ಎಲ್ಲ ಇತರ ಮೊತ್ತಗಳು; ಮತ್ತು

(iii) ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಅರೆ ವೈದ್ಯಕೀಯ ಪರೀಕ್ಷಾ ಮಂಡಳಿ ಮತ್ತು ನರ್ಸಿಂಗ್ ಪರೀಕ್ಷಾ ಮಂಡಳಿಯ ನಿಧಿ.

(3) ರಾಜ್ಯ ಸರ್ಕಾರದಿಂದ ಅನ್ಯಥಾ ನಿರ್ದೇಶಿತವಾಗಿದ್ದ ಹೊರತು, ನಿಧಿಗೆ ಜಮೆಯಾದ ಎಲ್ಲ ಹಣವನ್ನು ಯಾವುದೇ ಅನುಸೂಚಿತ ಬ್ಯಾಂಕಿನಲ್ಲಿ ತೊಡಗಿಸತಕ್ಕದ್ದು.

(4) ಪ್ರಾಧಿಕಾರದ ಕಾರ್ಯನಿರ್ವಹಣಾ ನಿರ್ದೇಶಕನಿಗೆ ಮತ್ತು ಇತರ ಅಧಿಕಾರಿಗಳು ಮತ್ತು ನೌಕರರಿಗೆ ಸಂದಾಯ ಮಾಡಬೇಕಾದ ವೇತನಗಳು, ಭತ್ಯೆಗಳು ಮತ್ತು ನಿವೃತ್ತಿ ವೇತನಗಳನ್ನು ಒಳಗೊಂಡಂತೆ ಪ್ರಾಧಿಕಾರದ ಆಡಳಿತಾತ್ಮಕ ವೆಚ್ಚಗಳನ್ನು ಪ್ರಾಧಿಕಾರದ ನಿಧಿಯಿಂದ ಭರಿಸತಕ್ಕದ್ದು.

**49. ಯೋಜನೆ ಮತ್ತು ಕಾರ್ಯಕ್ರಮಕ್ಕೆ ಹಂಚಿಕೆ.–** ರಾಜ್ಯ ಸರ್ಕಾರವು, ಪ್ರಾಧಿಕಾರದ ಯೋಜನೆ ಮತ್ತು ಕಾರ್ಯಕ್ರಮಗಳನ್ನು ದೃಷ್ಟಿಯಲ್ಲಿರಿಸಿಕೊಂಡು ರಾಜ್ಯದ ವಾರ್ಷಿಕ ಯೋಜನೆಯಲ್ಲಿ ಪ್ರಾಧಿಕಾರಕ್ಕೆ ಹಣಕಾಸು ಹಂಚಿಕೆಯನ್ನು ಮಾಡತಕ್ಕದ್ದು.

**50. ರಾಜ್ಯ ಸರ್ಕಾರದಿಂದ ಅನುದಾನ.–** ಪ್ರಾಧಿಕಾರವು ತನ್ನದೇ ಸ್ವಂತ ನಿಧಿಯನ್ನು ಉತ್ಪಾದಿಸಲು ಅಸಮರ್ಥವಾದಾಗ ಮಾತ್ರವೇ ಸರ್ಕಾರವು ಪ್ರಾಧಿಕಾರಕ್ಕೆ ಅನುದಾನ ನೀಡಬಹುದು.

**51. ಲೆಕ್ಕಪತ್ರ ಮತ್ತು ಲೆಕ್ಕಪರಿಶೋಧನೆ.–** (1) ಪ್ರಾಧಿಕಾರದ ನಿಧಿಯ ವರಮಾನದ ಮತ್ತು ವೆಚ್ಚದ ಲೆಕ್ಕಪತ್ರಗಳನ್ನು ನಿಯಮಿಸಬಹುದಾದ ಅಂಥ ನಿಯಮಗಳಿಗನುಸಾರವಾಗಿ ಇಡತಕ್ಕದ್ದು.

(2) ಪ್ರಾಧಿಕಾರವು, ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ಲೆಕ್ಕಪತ್ರಗಳ ವಾರ್ಷಿಕ ವಿವರಣೆಯನ್ನು ಸಿದ್ಧಪಡಿಸತಕ್ಕದ್ದು.

(3) ಪ್ರಾಧಿಕಾರದ ಲೆಕ್ಕಪತ್ರಗಳ ಲೆಕ್ಕ ಪರಿಶೋಧನೆಯನ್ನು ಕನಿಷ್ಠ ಮೂರು ವರ್ಷಗಳಿಗೊಮ್ಮೆ ರಾಜ್ಯ ಸರ್ಕಾರವು ನೇಮಿಸಬಹುದಾದ ಅಂಥ ಲೆಕ್ಕಪರಿಶೋಧಕನು ಮಾಡತಕ್ಕದ್ದು.

(4) ಲೆಕ್ಕಪರಿಶೋಧಕನಿಗೆ ಲೆಕ್ಕಪರಿಶೋಧನೆಯ ಉದ್ದೇಶಗಳಿಗಾಗಿ, ಪ್ರಾಧಿಕಾರದ ಎಲ್ಲ ಲೆಕ್ಕ ಪತ್ರಗಳು ಮತ್ತು ಇತರ ದಾಖಲೆಗಳನ್ನು ನೋಡಲು ಅವಕಾಶವಿರತಕ್ಕದ್ದು.

(5) ಪ್ರಾಧಿಕಾರವು ಲೆಕ್ಕಪರಿಶೋಧನೆಗೆ ನಿಯಮಿಸಬಹುದಾದ ಅಂಥ ಚಾರ್ಜುಗಳನ್ನು ತನ್ನ ನಿಧಿಯಿಂದ ಸಂದಾಯ ಮಾಡತಕ್ಕದ್ದು.

(6) ಪ್ರಾಧಿಕಾರವು, ಲೆಕ್ಕಪರಿಶೋಧಕನಿಂದ ವರದಿಯನ್ನು ಸ್ವೀಕರಿಸಿದ ತರುವಾಯ ಸಾಧ್ಯವಾದಷ್ಟು ಬೇಗನೆ, ಲೆಕ್ಕಪತ್ರಗಳ ವಾರ್ಷಿಕ ವಿವರಣೆಯ ಒಂದು ಪ್ರತಿಯನ್ನು ಲೆಕ್ಕ ಪರಿಶೋಧಕನ ವರದಿಯ ಒಂದು ಪ್ರತಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ನಿಯಮಿಸಬಹುದಾದ ಅಂಥ ರೀತಿಯಲ್ಲಿ ಲೆಕ್ಕಪತ್ರಗಳ ವಾರ್ಷಿಕ ವಿವರಣೆಯು ಪ್ರಕಟವಾಗುವಂತೆ ಮಾಡತಕ್ಕದ್ದು.

(7) ರಾಜ್ಯ ಸರ್ಕಾರವು ಲೆಕ್ಕಪರಿಶೋಧಕನ ವರದಿಯನ್ನು ಪರಿಶೀಲಿಸಿದ ತರುವಾಯ ಪ್ರಾಧಿಕಾರಕ್ಕೆ ತಾನು ಸೂಕ್ತವೆಂದು ಭಾವಿಸುವ ಅಂಥ ನಿರ್ದೇಶನಗಳನ್ನು ನೀಡಬಹುದು ಮತ್ತು ಪ್ರಾಧಿಕಾರವು ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

## ಅಧ್ಯಾಯ - *XI*

## ಸಂಕೀರ್ಣ

**52. ವರದಿ.–** ಪ್ರಾಧಿಕಾರವು, ನಿಯಮಿಸಬಹುದಾದ ಅಂಥ ದಿನಾಂಕಕ್ಕೆ ಮೊದಲು ಅಂಥ ನಮೂನೆಯಲ್ಲಿ ಮತ್ತು ಅಂಥ ಅವಧಿಯ ಅಂತರದಲ್ಲಿ ರಾಜ್ಯ ಸರ್ಕಾರಕ್ಕೆ ನಿಯಮಿಸಲಾದ ವರದಿಯನ್ನು ಸಲ್ಲಿಸತಕ್ಕದ್ದು.

**53. ಪ್ರಾಧಿಕಾರದ ಆಯವ್ಯಯ ಪತ್ರ.–** ಪ್ರಾಧಿಕಾರವು ಪ್ರತಿವರ್ಷ ಮುಂಬರುವ ಏಪ್ರಿಲ್ ಮೊದಲನೇ ದಿನಾಂಕದಿಂದ ಪ್ರಾರಂಭವಾಗುವ ಹಣಕಾಸು ವರ್ಷಕ್ಕಾಗಿ ತನ್ನ ವರಮಾನ ಮತ್ತು ವೆಚ್ಚದ ಆಯವ್ಯಯ ಅಂದಾಜನ್ನು ನಿಯಮಿಸಬಹುದಾದ ಅಂಥ ದಿನಾಂಕಕ್ಕೆ ಮೊದಲು ಮತ್ತು ಅಂಥ ನಮೂನೆಯಲ್ಲಿ ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

**54. ಅಪೀಲುಗಳು.–** ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುದನ್ನುಳಿದು, ಈ ಅಧಿನಿಯಮದ ಅಡಿಯಲ್ಲಿ ಯಾವೊಬ್ಬ ಅಧಿಕಾರಿಯು ಅಥವಾ ಪ್ರಾಧಿಕಾರವು ಹೊರಡಿಸಿದ ಯಾವುದೇ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು ಅಥವಾ ಯಾವುದೇ ಆಡಳಿತ ಪರಿಷತ್ತು ತೊಂದರೆಗೊಳಗಾದರೆ, ನಿಯಮಿಸಲಾದ ಅವಧಿಯೊಳಗಾಗಿ ನಿಯಮಿಸಲಾದ ಅಪೀಲು ಪ್ರಾಧಿಕಾರಕ್ಕೆ ಅಪೀಲನ್ನು ಸಲ್ಲಿಸಬಹುದು.

**55. ರಾಜ್ಯ ಸರ್ಕಾರದಿಂದ ಪುನರೀಕ್ಷಣೆ.–** (1) ಯಾವ ವ್ಯವಹರಣೆಯಲ್ಲಿ ಮಧ್ಯಸ್ಥಗಾರನಿಗೆ ಒಪ್ಪಿಸಲು ಅಥವಾ ಉಚ್ಚ ನ್ಯಾಯಾಲಯಕ್ಕೆ ಅಪೀಲನ್ನು ಸಲ್ಲಿಸಲು ಉಪಬಂಧಿಸಿರುವುದಿಲ್ಲವೋ ಅಂಥ ವ್ಯವಹರಣೆಗೆ ಸಂಬಂಧಪಟ್ಟಂತೆ ಯಾವುದೇ ಆಡಳಿತಾತ್ಮಕ ಅಥವಾ ನ್ಯಾಯಿಕ ಸ್ವರೂಪದ ತೀರ್ಮಾನದ ಅಥವಾ ಆದೇಶದ ಕ್ರಮಬದ್ಧತೆ, ಸರಿತನ, ಕಾನೂನು ಸಮ್ಮತತೆ ಅಥವಾ ಔಚಿತ್ಯದ ಬಗ್ಗೆ ಮನವರಿಕೆ ಮಾಡಿಕೊಳ್ಳಲು ರಾಜ್ಯ ಸರ್ಕಾರವು ತಾನಾಗಿಯೇ ಆಗಲಿ ಅಥವಾ ಹಿತಾಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯು ಸಲ್ಲಿಸಿದ ಅರ್ಜಿಯ ಮೇಲಾಗಲಿ ಅಂಥ ತೀರ್ಮಾನ ಅಥವಾ ಆದೇಶಕ್ಕೆ ಸಂಬಂಧ ಪಟ್ಟಂಥ ಶಿಕ್ಷಣ ಸಂಸ್ಥೆಯ ಅಥವಾ ಯಾವುದೇ ಪ್ರಾಧಿಕಾರದ ಅಧಿಕಾರಿಯ ಅಥವಾ ವ್ಯಕ್ತಿಯ ದಾಖಲೆಯನ್ನು ತರಿಸಿಕೊಂಡು ಪರೀಕ್ಷಿಸಬಹುದು ಮತ್ತು ಯಾವುದೇ ಅಂಥ ತೀರ್ಮಾನವನ್ನು ಅಥವಾ ಆದೇಶವನ್ನು ಮಾರ್ಪಾಟುಗೊಳಿಸಬೇಕೆಂದು, ರದ್ದುಗೊಳಿಸಬೇಕೆಂದು ಅಥವಾ ವಿಪರ್ಯಾಯಗೊಳಿಸಬೇಕೆಂದು, ಮರುಪರಿಶೀಲನೆಗಾಗಿ ಕಳಿಸಿಕೊಡಬೇಕೆಂದು ಸರ್ಕಾರಕ್ಕೆ ಕಂಡುಬರುವ ಯಾವುದೇ ಸಂದರ್ಭದಲ್ಲಿ, ಅದು ತದನುಸಾರವಾಗಿ ಆದೇಶವನ್ನು ಹೊರಡಿಸಬಹುದು:

ಪರಂತು, ರಾಜ್ಯ ಸರ್ಕಾರವು, ಯಾವೊಬ್ಬ ಪಕ್ಷಕಾರರನ್ನು ಪ್ರತಿಕೂಲವಾಗಿ ಬಾಧಿಸುವಂಥ ಯಾವುದೇ ಆದೇಶವನ್ನು, ಆ ಪಕ್ಷಕಾರನಿಗೆ ತನ್ನ ಅಹವಾಲನ್ನು ಸಲ್ಲಿಸಲು ಅವಕಾಶವನ್ನು ಕೊಟ್ಟ ಹೊರತು ಹೊರಡಿಸತಕ್ಕದ್ದಲ್ಲ.

(2) ರಾಜ್ಯ ಸರ್ಕಾರವು, (1)ನೇ ಉಪಪ್ರಕರಣದ ಅಡಿಯಲ್ಲಿ ಅಂಥ ಯಾವುದೇ ತೀರ್ಮಾನ ಅಥವಾ ಆದೇಶದ ಬಗ್ಗೆ ಅಧಿಕಾರಗಳನ್ನು ಚಲಾಯಿಸುವವರೆಗೆ, ಯಾವುದೇ ಅಂಥ ತೀರ್ಮಾನದ ಅಥವಾ ಆದೇಶದ ಜಾರಿಯನ್ನು ತಡೆಹಿಡಿಯಬಹುದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ಸಲ್ಲಿಸಬೇಕಾದ ಪ್ರತಿಯೊಂದು ಅರ್ಜಿಯನ್ನು ನಿಯಮಿಸಬಹುದಾದ ಅಂಥ ಅವಧಿಯಲ್ಲಿ ಮತ್ತು ಅಂಥ ರೀತಿಯಲ್ಲಿ ಮತ್ತು ಫೀಜಿನೊಂದಿಗೆ ಸಲ್ಲಿಸತಕ್ಕದ್ದು.

**56. ಪುನರಾವಲೋಕನ.–** (1) ರಾಜ್ಯ ಸರ್ಕಾರವು ಅಥವಾ ಸಂದರ್ಭಾನುಸಾರ ಕಾರ್ಯನಿರ್ವಹಣಾ ನಿರ್ದೇಶಕನು ಯಾವುದೇ ಸಮಯದಲ್ಲಿ ತಾವಾಗಿಯೇ ಆಗಲಿ ಅಥವಾ ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಯಾವುದೇ ಆದೇಶವನ್ನು ಹೊರಡಿಸಿದ ತೊಂಭತ್ತು ದಿನಗಳ ಒಳಗಾಗಿ ಹಿತಾಸಕ್ತ ವ್ಯಕ್ತಿಯು ಸಲ್ಲಿಸಿದ ಅರ್ಜಿಯ ಮೇಲೆಯಾಗಲಿ ಒಂದು ವೇಳೆ ಆ ಯಾವುದೇ ಆದೇಶವನ್ನು ಯಾವುದೇ ಸಂಗತಿಯ ಅಥವಾ ಕಾನೂನಿನ ತಪ್ಪಿನಿಂದಾಗಿ ಅಥವಾ ಯಾವುದೇ ವಸ್ತು ಸಂಗತಿಯ ಅರಿವಿಲ್ಲದೆಯೇ ಅವರು ಅಥವಾ ಆತ ಹೊರಡಿಸಿದ್ದರೆ, ಆ ಯಾವುದೇ ಆದೇಶವನ್ನು ಪುನರಾವಲೋಕನ ಮಾಡಬಹುದು.

(2) 55ನೇ ಪ್ರಕರಣದ (1)ನೇ ಉಪಪ್ರಕರಣದ ಪರಂತುಕದಲ್ಲಿರುವ ಹಾಗೂ (2) ಮತ್ತು (3)ನೇ ಉಪಪ್ರಕರಣದಲ್ಲಿರುವ ಉಪಬಂಧಗಳನ್ನು ಆದಷ್ಟು ಮಟ್ಟಿಗೆ, ಆ ಪ್ರಕರಣದ (1)ನೇ ಉಪಪ್ರಕರಣದ ವ್ಯವಹರಣೆಗಳಿಗೆ ಅವು ಅನ್ವಯವಾಗುವಂತೆಯೇ ಈ ಪ್ರಕರಣದ ಅಡಿಯಲ್ಲಿ ಯಾವುದೇ ವ್ಯವಹರಣೆಗಳಿಗೆ ಸಂಬಂಧಿಸಿದಂತೆಯೂ ಅನ್ವಯಿಸಬಹುದು.

**57. ನಿರ್ದೇಶನಗಳನ್ನು ಕೊಡಲು ಸರ್ಕಾರದ ಅಧಿಕಾರ.–** (1) ರಾಜ್ಯ ಸರ್ಕಾರವು ಈ ಅಧಿನಿಯಮದ ಇತರ ಉಪಬಂಧಗಳಿಗೆ ಒಳಪಟ್ಟು ಆದೇಶದ ಮೂಲಕ ಪ್ರಾಧಿಕಾರಕ್ಕೆ ಅಥವಾ ನಿರ್ದೇಶಕನಿಗೆ ಅಥವಾ ರಿಜಿಸ್ಟ್ರಾರ್ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಇತರ ಯಾವೊಬ್ಬ ಅಧಿಕಾರಿಗೆ ಸದರಿ ಆದೇಶದಲ್ಲಿ ನಿರ್ದಿಷ್ಟಪಡಿಸಿರುವ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ವಿಚಾರಣೆ ಮಾಡಲು ಅಥವಾ ಈ ಅಧಿನಿಯಮದ ಅಡಿಯಲ್ಲಿ ಸೂಕ್ತ ವ್ಯವಹರಣೆಗಳನ್ನು ಕೈಗೊಳ್ಳಲು ನಿರ್ದೇಶಿಸಬಹುದು ಮತ್ತು ನಿರ್ದೇಶಕನು ಅಥವಾ ಸಂದರ್ಭಾನುಸಾರವಾಗಿ ಇತರ ಅಧಿಕಾರಿಯು ತಾನು ಮಾಡಿದ ವಿಚಾರಣೆಯ ಅಥವಾ ಕೈಗೊಂಡ ವ್ಯವಹರಣೆಯ ಫಲಿತಾಂಶವನ್ನು ಯಥಾ ಕ್ರಮದಲ್ಲಿ ರಾಜ್ಯ ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

(2) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅಥವಾ ಅದರ ಅಡಿಯಲ್ಲಿ ರಚಿಸಲಾದ ಯಾವುದೇ ನಿಯಮಗಳನ್ನು ಅಥವಾ ಆದೇಶಗಳನ್ನು ಅಥವಾ ಅವುಗಳ ಉಪಬಂಧಗಳನ್ನು ಜಾರಿಗೊಳಿಸುವುದಕ್ಕಾಗಿ ಅವಶ್ಯವೆಂದು ಅಥವಾ ಯುಕ್ತವೆಂದು ತಾನು ಅಭಿಪ್ರಾಯಪಡುವಂಥ ನಿರ್ದೇಶನಗಳನ್ನು ಯಾವುದೇ ಶಿಕ್ಷಣ ಸಂಸ್ಥೆಗೆ ನೀಡಬಹುದು ಮತ್ತು ಸಂದರ್ಭಾನುಸಾರವಾಗಿ ಅಂಥ ಶಿಕ್ಷಣ ಸಂಸ್ಥೆಯ ಆಡಳಿತ ವರ್ಗವು ಅಂಥ ಪ್ರತಿಯೊಂದು ನಿರ್ದೇಶನವನ್ನು ಪಾಲಿಸತಕ್ಕದ್ದು.

(3) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ತನ್ನ ನಿಯಂತ್ರಣದಲ್ಲಿರುವ ಅಧಿಕಾರಿಗಳಿಗೆ ಅಥವಾ ಪ್ರಾಧಿಕಾರಿಗಳಿಗೆ ತಾನು ಅವಶ್ಯಕವೆಂದು ಅಥವಾ ಯುಕ್ತವೆಂದು ಅಭಿಪ್ರಾಯಪಡುವಂತಹ ನಿರ್ದೇಶನಗಳನ್ನು ನೀಡಬಹುದು ಮತ್ತು ಅಂಥ ನಿರ್ದೇಶನಗಳನ್ನು ಪಾಲಿಸುವುದು ಅಂಥ ಅಧಿಕಾರಿಗಳ ಅಥವಾ ಪ್ರಾಧಿಕಾರಿಗಳ ಕರ್ತವ್ಯವಾಗಿರತಕ್ಕದ್ದು.

**58. ಪ್ರವೇಶಿಸುವ ಮತ್ತು ಪರಿಶೀಲಿಸುವ ಅಧಿಕಾರ.– (1)** ನಿಯಮಿಸಬಹುದಾದ ಅಂಥ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಪ್ರತಿಯೊಬ್ಬ ಅಧಿಕಾರಿಯೂ, ನಿಯಮಿಸಬಹುದಾದ ಅಂಥ ಷರತ್ತುಗಳಿಗೊಳಪಟ್ಟು, ಶಿಕ್ಷಣ ಸಂಸ್ಥೆಯ ವಾಡಿಕೆಯ ಕೆಲಸದ ವೇಳೆಯ ಅವಧಿಯ ಯಾವುದೇ ಸಮಯದಲ್ಲಿ ತನ್ನ ಅಧಿಕಾರ ವ್ಯಾಪ್ತಿಯೊಳಗಿರುವ ಯಾವುದೇ ಅಂಥ ಸಂಸ್ಥೆಯ ಯಾವುದೇ ಆವರಣಗಳನ್ನು ಪ್ರವೇಶಿಸಲು ಮತ್ತು ಈ ಅಧಿನಿಯಮದ ಅಡಿಯಲ್ಲಿ ತನ್ನ ಅಧಿಕಾರಗಳನ್ನು ಚಲಾಯಿಸುವ ಮತ್ತು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವ ಉದ್ದೇಶಕ್ಕಾಗಿ, ಅಂಥ ಸಂಸ್ಥೆಗೆ ಸಂಬಂಧಿಸಿದ ಯಾವುದೇ ದಾಖಲೆಯನ್ನು, ರಿಜಿಸ್ಟರನ್ನು ಅಥವಾ ಇತರ ದಸ್ತಾವೇಜುಗಳನ್ನು ಅಥವಾ ಯಾವುದೇ ಚರ ಅಥವಾ ಸ್ಥಿರ ಸ್ವತ್ತನ್ನು ಪರಿಶೀಲಿಸಲು ಸಕ್ಷಮವಾಗಿರತಕ್ಕದ್ದು.

(2) ಈ ಸಂಬಂಧದಲ್ಲಿ ಪ್ರಾಧಿಕಾರವು ಅಧಿಕೃತಗೊಳಿಸಿದ ಯಾವೊಬ್ಬ ಅಧಿಕಾರಿಯು, ಅಧಿನಿಯಮದ ಯಾವುವೇ ಉಪಬಂಧಗಳ ಉಲ್ಲಂಘನೆಯಾಗುತ್ತಿದೆ ಎಂದು ಅಥವಾ ಉಲ್ಲಂಘನೆಯಾಗಿದೆ ಎಂದು ಅವನಿಗೆ ನಂಬಲು ಕಾರಣವಿದ್ದರೆ, ಯಾವುದೇ ಶಿಕ್ಷಣ ಸಂಸ್ಥೆಯ ವಾಡಿಕೆ ಕೆಲಸದ ವೇಳೆಯ ಯಾವುದೇ ಸಮಯದಲ್ಲಿ ಅಂಥ ಸಂಸ್ಥೆಗೆ ಅಥವಾ ಆ ಸಂಸ್ಥೆಯ ಆಡಳಿತ ಪರಿಷತ್ತಿಗೆ ಸೇರಿದ ಯಾವುದೇ ಆವರಣವನ್ನು ಪ್ರವೇಶಿಸಬಹುದು ಮತ್ತು ದಾಖಲೆಗಳು, ಲೆಕ್ಕಪತ್ರಗಳು, ರಿಜಿಸ್ಟರುಗಳು ಅಥವಾ ಇತರ ದಾಖಲೆಗಳನ್ನು ಅಂಥ ಸಂಸ್ಥೆಗೆ ಅಥವಾ ಆಡಳಿತ ಮಂಡಳಿಗೆ ಅವು ಸಂಬಂಧಪಡುವಷ್ಟರ ಮಟ್ಟಿಗೆ ಶೋಧಿಸಬಹುದು ಮತ್ತು ಪರಿಶೀಲಿಸಬಹುದು ಮತ್ತು ಯಾವುದೇ ಅಂಥ ಉಲ್ಲಂಘನೆ ನಡೆಯುತ್ತಿದೆಯೇ ಅಥವಾ ನಡೆದಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ಅಂಥ ದಾಖಲೆ, ಲೆಕ್ಕಪತ್ರ ಅಥವಾ ಇತರ ದಸ್ತಾವೇಜನ್ನು ವಶಪಡಿಸಿಕೊಳ್ಳಬಹುದು.

(3) ಈ ಅಧಿನಿಯಮದ ಪ್ರಾರಂಭದಲ್ಲಿ ಅಸ್ತಿತ್ವದಲ್ಲಿರುವ ಯಾವುದೇ ಶಿಕ್ಷಣ ಸಂಸ್ಥೆಯ ಹಣಕಾಸುಗಳನ್ನು ಅಥವಾ ಸಂಪನ್ಮೂಲಗಳನ್ನು ಅಥವಾ ಆಸ್ತಿಗಳನ್ನು ಸೂಕ್ತವಾಗಿ ಹಾಗೂ ಪರಿಣಾಮಕಾರಿಯಾಗಿ ಬಳಕೆಯಾಗುವಂತೆ ಖಚಿತಪಡಿಸಿಕೊಳ್ಳುವುದಕ್ಕಾಗಿ, ರಾಜ್ಯ ಸರ್ಕಾರವು, (2)ನೇ ಉಪಪ್ರಕರಣದ ಉಪಬಂಧಗಳ ನೆರವು ಪಡೆಯುವುದು ಮತ್ತು ಯಾವುದೇ ಸಂಸ್ಥೆಯ ಹಣಕಾಸುಗಳು, ಸಂಪನ್ಮೂಲಗಳು ಹಾಗೂ ಆಸ್ತಿಗಳು - ಇವುಗಳ ಬಗ್ಗೆ ಖಚಿತವಾಗಿ ತಿಳಿದುಕೊಳ್ಳುವುದು ಮತ್ತು ಹಾಗೆ ಖಚಿತವಾಗಿ ತಿಳಿದುಕೊಂಡ ತರುವಾಯ, ಆಡಳಿತ ಪರಿಷತ್ತಿಗೆ ತಾನು ಸೂಕ್ತವೆಂದು ಭಾವಿಸುವಂಥ ನಿರ್ದೇಶನ ನೀಡುವುದು ಸಕ್ಷಮವಾಗಿರತಕ್ಕದ್ದು.

(4) ಶೋಧನೆ ಹಾಗೂ ಜಫ್ತಿಗೆ ಸಂಬಂಧಪಡುವ ದಂಡ ಪ್ರಕ್ರಿಯಾ ಸಂಹಿತೆ, 1973ರ (1974ರ ಕೇಂದ್ರಾಧಿನಿಯಮ 2) ಉಪಬಂಧಗಳು, (2)ನೇ ಉಪಪ್ರಕರಣದ ಅಡಿಯಲ್ಲಿಯ ಶೋಧನೆ ಹಾಗೂ ಜಫ್ತಿಗೆ ಸಾಧ್ಯವಾದಷ್ಟು ಮಟ್ಟಿಗೆ ಅನ್ವಯವಾಗತಕ್ಕದ್ದು.

**59. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಜಾರಿಗೊಳಿಸುವುದಕ್ಕಾಗಿ ಅಧಿಸೂಚನೆಯ ಮೂಲಕ ಅಥವಾ ಪೂರ್ವಭಾವಿ ಪ್ರಕಟಣೆಯ ತರುವಾಯ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ಹೊರಡಿಸಿದ ಪ್ರತಿಯೊಂದು ಅಧಿಸೂಚನೆಯನ್ನು ಮತ್ತು ರಚಿಸಿದ ಪ್ರತಿಯೊಂದು ನಿಯಮವನ್ನು ಅದನ್ನು ಹೊರಡಿಸಿದ ಅಥವಾ ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಅದು ಅಧಿವೇಶನದಲ್ಲಿರುವಾಗ ಮತ್ತು ಅದು ಅಧಿವೇಶನದಲ್ಲಿ ಇಲ್ಲದಿರುವಾಗ ಅಧಿವೇಶನದ ತರುವಾಯ ಅದರ ನಿಕಟ ತರುವಾಯ ಬರುವ ಒಂದು ಅಥವಾ ಎರಡು ಅಧಿವೇಶನಗಳಲ್ಲಿ ಅಡಕಗೊಳ್ಳಬಹುದಾದ ಒಟ್ಟು ಹದಿನಾಲ್ಕು ದಿವಸಗಳ ಅವಧಿಯವರೆಗೆ ಇಡತಕ್ಕದ್ದು ಮತ್ತು ಹಾಗೆ ಇರಿಸಲಾದ ಅಧಿವೇಶನದ ಅಥವಾ ನಿಕಟ ತರುವಾಯದ ಅಧಿವೇಶನದ ಮುಕ್ತಾಯಕ್ಕೆ ಮುಂಚೆ ಆ ಅಧಿಸೂಚನೆಯಲ್ಲಿ ಅಥವಾ ನಿಯಮದಲ್ಲಿ ಅಥವಾ ಅಧಿಸೂಚನೆ ಅಥವಾ ನಿಯಮದ ರದ್ದಿಯಾತಿಯಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅನಂತರ ಆ ಅಧಿಸೂಚನೆಯು ಅಥವಾ ನಿಯಮವು, ಆ ಮಾರ್ಪಾಟು ಅಥವಾ ರದ್ದಿಯಾತಿಯ ಅಧಿಸೂಚನೆಯ ದಿನಾಂಕದಿಂದ ಸಂದರ್ಭಾನುಸಾರ ಅಂಥ ಮಾರ್ಪಾಟು ಹೊಂದಿದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ರದ್ದಾಗತಕ್ಕದ್ದು. ಆದರೆ ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ಅಧಿಸೂಚನೆಯ ಅಥವಾ ನಿಯಮದ ಅಡಿಯಲ್ಲಿ ಆ ಹಿಂದೆ ಮಾಡಲಾದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವಾಗತಕ್ಕದ್ದಲ್ಲ.

**60. ವಿನಿಯಮಗಳನ್ನು ರಚಿಸಲು ಪ್ರಾಧಿಕಾರದ ಅಧಿಕಾರ.–** ಪ್ರಾಧಿಕಾರವು ಈ ಅಧಿನಿಯಮಗಳ ಉಪಬಂಧಗಳಿಗೆ ಒಳಪಟ್ಟು ಮತ್ತು 59ನೇ ಪ್ರಕರಣದ ಅಡಿಯಲ್ಲಿ ಮಾಡಲಾದ ನಿಯಮಗಳಿಗೆ ಒಳಪಟ್ಟು ಮತ್ತು ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು ಅಧಿಸೂಚನೆಯ ಮೂಲಕ ವಿನಿಯಮಗಳನ್ನು ರಚಿಸಬಹುದು.

**61. ಮೊದಲ ಕಾರ್ಯನಿರ್ವಹಣಾ ನಿರ್ದೇಶಕರು.–** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಂದು ಅರೆ ವೈದ್ಯಕೀಯ ಮಂಡಳಿ ಮತ್ತು ನರ್ಸಿಂಗ್ ಪರೀಕ್ಷಾ ಮಂಡಳಿಯ ಪ್ರಭಾರದಲ್ಲಿರುವ ವಿಶೇಷ ಅಧಿಕಾರಿಯು ಪ್ರಾಧಿಕಾರದ ಮೊದಲ ಕಾರ್ಯನಿರ್ವಹಣಾ ನಿರ್ದೇಶಕರಾಗಿರತಕ್ಕದ್ದು. ಮೊದಲ ಕಾರ್ಯನಿರ್ವಹಣಾ ನಿರ್ದೇಶಕರು ಅಧ್ಯಕ್ಷರ ಪೂರ್ವಾನುಮೋದನೆಯೊಂದಿಗೆ ಈ ಅಧಿನಿಯಮದ ಉಪಬಂಧಗಳನ್ನು ನೆರವೇರಿಸುವ ಉದ್ದೇಶಕ್ಕಾಗಿ ಪ್ರಾಧಿಕಾರದ ಎಲ್ಲಾ ಅಥವಾ ಯಾವುದೇ ಪ್ರಕಾರ್ಯಗಳನ್ನು ನೆರವೇರಿಸಬಹುದು ಮತ್ತು ಆ ಕಾರಣಕ್ಕಾಗಿ ಈ ಅಧಿನಿಯಮದಲ್ಲಿ ಉಪಬಂಧಿಸಲಾದಂತೆ ಅಂಥ ಪ್ರಾಧಿಕಾರವು ಅಸ್ತಿತ್ವಕ್ಕೆ ಬರುವವರೆಗೂ ಆ ಪ್ರಾಧಿಕಾರವು ಈ ಅಧಿನಿಯಮದಡಿಯಲ್ಲಿ ಯಾವ ಅಧಿಕಾರಗಳನ್ನು ಚಲಾಯಿಸಬೇಕಾಗಿತ್ತೋ ಅಥವಾ ಯಾವ ಕರ್ತವ್ಯಗಳನ್ನು ನಿರ್ವಹಿಸಬೇಕಾಗಿತ್ತೋ ಅಂಥ ಯಾವುವೇ ಅಧಿಕಾರಗಳನ್ನು ಚಲಾಯಿಸಬಹುದು ಅಥವಾ ಅಂಥ ಯಾವುದೇ ಕರ್ತವ್ಯಗಳನ್ನು ನಿರ್ವಹಿಸಬಹುದು.

**62. ತಾತ್ಕಾಲಿಕ ಉಪಬಂಧಗಳು.–** ಕರ್ನಾಟಕ ಶುಷ್ರೂಷಕಿಯರು, ದಾದಿಯರು ಮತ್ತು ಆರೋಗ್ಯ ಸಂದರ್ಶಕರ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ 4) ಅಡಿಯಲ್ಲಿ ರಚಿಸಲಾದ ಅಥವಾ ಹೊರಡಿಸಿದ ಅಥವಾ ಅನ್ಯಥಾ ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಿರುವಷ್ಟರ ಮಟ್ಟಿಗೆ ಈ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮೊದಲು ಮತ್ತು ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಂದು ಜಾರಿಯಲ್ಲಿದ್ದ ಅಧಿನಿಯಮವಾದಂಥ ಅಧಿನಿಯಮದ ಅನುಸರಣೆಗೆ ಸಂಬಂಧಿಸಿದ ಯಾವುದೇ ವಿಷಯಗಳಿಗೆ ಉಪಬಂಧವನ್ನು ಕಲ್ಪಿಸಿದ ಅಥವಾ

ಸಂಬಂಧಪಟ್ಟ ಯಾವುದೇ ನಿಯಮ, ಅಧಿಸೂಚನೆ, ಆದೇಶ ಅಥವಾ ನೇಮಕಾತಿಗಳು ಜಾರಿಯಲ್ಲಿ ಮುಂದುವರಿಯತಕ್ಕದ್ದು ಮತ್ತು ಈ ಅಧಿನಿಯಮದಡಿಯಲ್ಲಿ ಮಾಡಲಾದ ಅಥವಾ ಕೈಗೊಂಡ ಯಾವುದೇ ಕ್ರಮ ಅಥವಾ ಯಾವುದೇ ನಿಯಮ, ಅಧಿಸೂಚನೆ, ಆದೇಶ ಅಥವಾ ನೇಮಕಾತಿಗಳ ಮೂಲಕ ರದ್ದುಗೊಳಿಸದ ಹೊರತು ಮತ್ತು ರದ್ದುಗೊಳಿಸುವವರೆಗೆ ಈ ಅಧಿನಿಯಮದ ಸಂವಾದಿ ಉಪಬಂಧಗಳ ಅಡಿಯಲ್ಲಿ ರಚಿಸಿದಲ್ಲಿ ಅಥವಾ ಹೊರಡಿಸಿದಲ್ಲಿ ಅಥವಾ ನೇಮಕ ಮಾಡಿದಲ್ಲಿ ಜಾರಿಯಲ್ಲಿರುವಂತೆ ಮತ್ತು ಪರಿಣಾಮಕಾರಿಯಾಗಿರುವಂತೆ ಮುಂದುವರಿಯತಕ್ಕದ್ದು.

**63. 1962ರ ಕರ್ನಾಟಕ ಅಧಿನಿಯಮದ ತಿದ್ದುಪಡಿ.–** ಕರ್ನಾಟಕ ಶುಶ್ರೂಷಕಿಯರು, ದಾದಿಯರು ಮತ್ತು ಆರೋಗ್ಯ ಸಂದರ್ಶಕರ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ 4) 23 ಮತ್ತು 24ನೇ ಪ್ರಕರಣಗಳನ್ನು ಬಿಟ್ಟು ಬಿಡತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ರಾಜ್ಯದಲ್ಲಿ ನರ್ಸಿಂಗ್ ಮತ್ತು ಅರೆವೈದ್ಯಕೀಯ ಶಿಕ್ಷಣವನ್ನು ಸಮರ್ಥಗೊಳಿಸುವ, ವ್ಯವಸ್ಥಿತವಾಗಿ ಕಾರ್ಯನಿರ್ವಹಿಸುವ ಉದ್ದೇಶಕ್ಕಾಗಿ ಮತ್ತು ಶಿಕ್ಷಣದ ಗುಣಮಟ್ಟವನ್ನು ಕಾಪಾಡುವುದಕ್ಕಾಗಿ ಹಾಗೂ ಅಭಿವೃದ್ಧಿಪಡಿಸುವುದಕ್ಕಾಗಿ ಒಂದು ಪ್ರಾಧಿಕಾರವನ್ನು ಸ್ಥಾಪಿಸಿ ನಿಗಮಿತಗೊಳಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನಾ ಪತ್ರ

ಈ ಶಾಸನದ ಜಾರಿಯಾದಲ್ಲಿ, ಈ ಹಂತದಲ್ಲಿ ರಾಜ್ಯದ ಬೊಕ್ಕಸಕ್ಕೆ ಯಾವುದೇ ಆರ್ಥಿಕ ಹೊರೆಯುಂಟಾಗುವುದಿಲ್ಲ. ಪ್ರಸ್ತುತ ಆರ್ಥಿಕ ವೆಚ್ಚವನ್ನು ನರ್ಸಿಂಗ್ ಮತ್ತು ಅರೆವೈದ್ಯಕೀಯ ಮಂಡಲಿಯು ತಮ್ಮ ಸ್ವಂತ ನಿಧಿಗಳಿಂದ ಭರಿಸುತ್ತದೆ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತು ಜ್ಞಾಪನ ಪತ್ರ

**ಖಂಡ 4:** (4)ನೇ ಉಪಖಂಡವು, ಪ್ರಾಧಿಕಾರದ ಸದಸ್ಯರಿಗೆ ಸಂದಾಯಮಾಡಬೇಕಾದ ಭತ್ಯೆಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 8:** (i) (1)ನೇ ಉಪಖಂಡವು, ಪ್ರಾಧಿಕಾರವು ತನ್ನ ಪ್ರಕಾರ್ಯವನ್ನು ಪರಿಣಾಮಕಾರಿಯಾಗಿ ನೆರವೇರಿಸಲು ರಾಜ್ಯ ಸರ್ಕಾರದ ಅಂಥ ಅಧಿಕಾರಿಗಳು ಮತ್ತು ನೌಕರರ ಅಥವಾ ಅಂಥ ಇತರ ಅಧಿಕಾರಿಗಳನ್ನು ಪ್ರಾಧಿಕೃತಗೊಳಿಸುವ, ನೇಮಕ ಮಾಡುವ ಅಥವಾ ಪ್ರತಿನಿಯೋಜನೆ ಮಾಡುವ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(ii) (2)ನೇ ಉಪಖಂಡವು, ಪ್ರಾಧಿಕಾರದ ಅಧಿಕಾರಿಗಳು ಅಥವಾ ನೌಕರರ ನೇಮಕಾತಿ ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 11:** (4)ನೇ ಉಪಖಂಡವು, ಕಾರ್ಯನಿರ್ವಹಣಾ ಸಮಿತಿಯ ಆಡಳಿತಾತ್ಮಕ ಮತ್ತು ಹಣಕಾಸು ಅಧಿಕಾರಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 15:** (2)ನೇ ಉಪಖಂಡವು, ತಜ್ಞರಿಗೆ ಅವರ ಸೇವೆಗಳಿಗಾಗಿ ಸಂದಾಯಮಾಡಬೇಕಾದ ಗೌರವಧನ ಮತ್ತು ಭತ್ಯೆಗಳ ಮೊತ್ತದ ಸಂಬಂಧದಲ್ಲಿ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 18:** (2)ನೇ ಉಪಖಂಡದ (ಬಿ) ಬಾಬಿನಲ್ಲಿ, ಸ್ಥಳೀಯ ಪ್ರಾಧಿಕಾರ ಅಥವಾ ವ್ಯಕ್ತಿಗಳ ಖಾಸಗಿ ನಿಕಾಯದಿಂದ ಸ್ಥಾಪಿತವಾದ ಶಿಕ್ಷಣ ಸಂಸ್ಥೆಗಳನ್ನು ನಿರ್ವಹಿಸಲು ನಿರ್ದಿಷ್ಟ ವಿವರಣೆಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 20:** (1)ನೇ ಉಪಖಂಡವು ಶಿಕ್ಷಣ ಸಂಸ್ಥೆಗಳಿಗಾಗಿ ಪಠ್ಯವಿಷಯಗಳಿಗೆ ಸಂಬಂಧಿಸಿದ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 22:** (i) (2)ನೇ ಉಪಖಂಡದ (ಸಿ) ಬಾಬಿನಲ್ಲಿ, ಸಂಸ್ಥೆಯ ಬೋಧಕ ಮತ್ತು ಇತರ ಸಿಬ್ಬಂದಿಯ ವಸತಿ, ನೇಮಕಾತಿಯ ಸಂಬಂಧದಲ್ಲಿ ಇತರ ಸಾಮಾನ್ಯ ಅಥವಾ ವಿಶೇಷ ಷರತ್ತುಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(ii) (3)ನೇ ಉಪಖಂಡವು ಮನ್ನಣೆಯ ಮಂಜೂರಾತಿಗಾಗಿ ಖಾಸಗಿ ವೈದ್ಯಕೀಯ ಸಂಸ್ಥೆಯ ಯಾವುದೇ ಆಡಳಿತ ಪರಿಷತ್ತಿನಿಂದ ಅರ್ಜಿಯ ವಿವರಗಳು, ವಿಧಾನ ಮತ್ತು ಫೀಜಿನ ಸಂದಾಯಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 23:** (1)ನೇ ಉಪಖಂಡವು ಪ್ರಾಧಿಕಾರದ ಅಂಥ ಸಂಖ್ಯೆಯ ತಜ್ಞರ ಮಂಡಳಿಗಳ ರಚನೆಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 24:** (i) (1)ನೇ ಉಪಖಂಡದ (ಎ) ಬಾಬಿನಲ್ಲಿ, ಈ ಅಧಿನಿಯಮದ ಅಡಿಯಲ್ಲಿ ಮನ್ನಣೆ ಪಡೆದ ಯಾವ ಷರತ್ತುಗಳ ಮೇಲೆ ಸಂಸ್ಥೆಯನ್ನು ಶಿಕ್ಷಣ ಸಂಸ್ಥೆಗಳೆಂದು ಭಾವಿಸಬೇಕೆಂಬ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(ii) (1)ನೇ ಉಪಖಂಡದ (ಬಿ) ಖಂಡವು, ಸಂಸ್ಥೆಗಳು ಯಾವ ಅವಧಿಯೊಳಗೆ ಮತ್ತು ಯಾವ ಪ್ರಕ್ರಿಯೆಗೆ ಒಳಪಟ್ಟು ಪಾಲಿಸತಕ್ಕದ್ದೆಂಬ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 26:** (2)ನೇ ಉಪಖಂಡದ (ಬಿ) ಬಾಬಿನಲ್ಲಿ, ಸ್ಥಳೀಯ ಪ್ರಾಧಿಕಾರ ಸಂಸ್ಥೆಯು ವ್ಯವಸ್ಥಾಪನೆಯ ವಾರ್ಷಿಕ ವರದಿ ಮತ್ತು ಆಯವ್ಯಯ ಅಂದಾಜಿನ ಸಲ್ಲಿಕೆಯ ವಿಧಾನಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 31:** (1)ನೇ ಉಪಖಂಡವು, ಖಾಸಗಿ ಶಿಕ್ಷಣ ಸಂಸ್ಥೆಗಳ ನೌಕರರ ಅನುಸೂಚಿಯ ನಿರ್ವಹಣೆಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 34:** (2)ನೇ ಉಪಖಂಡವು, ಖಾಸಗಿ ಶಿಕ್ಷಣ ಸಂಸ್ಥೆಯ ಸ್ವತ್ತುಗಳ ಪಟ್ಟಿಯನ್ನು ಸಕ್ಷಮ ಪ್ರಾಧಿಕಾರಕ್ಕೆ ಯಾವ ದಿನಾಂಕಕ್ಕೆ ಮೊದಲು ಒದಗಿಸಬೇಕು ಎಂಬ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 35:** (1)ನೇ ಉಪಖಂಡವು, ಆಡಳಿತ ಮಂಡಳಿಯ ಮೂಲಕ ಖಾಸಗಿ ಶಿಕ್ಷಣ ಸಂಸ್ಥೆಯ ನಿಧಿಗಳ ಬಳಕೆಯ ವಿಧಾನಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(2)ನೇ ಉಪಖಂಡವು, ಖಾಸಗಿ ಶಿಕ್ಷಣ ಸಂಸ್ಥೆಯ ಮೂಲಕ ನಿಧಿಗಳನ್ನು ಠೇವಣಿ ಇಡುವ ವಿಧಾನಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 51:** (1)ನೇ ಉಪಖಂಡವು, ಪ್ರಾಧಿಕಾರದ ನಿಧಿಯ ಆಯ ಮತ್ತು ವ್ಯಯ ಲೆಕ್ಕಪತ್ರಗಳನ್ನು ನಿರ್ವಹಿಸುವ ವಿಧಾನಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಉಪಖಂಡ (2), ಪ್ರಾಧಿಕಾರದ ಲೆಕ್ಕಪತ್ರಗಳ ವಾರ್ಷಿಕ ವಿವರಪಟ್ಟಿಯನ್ನು ಸಿದ್ಧಪಡಿಸುವುದಕ್ಕೆ ಸಂಬಂಧಿಸಿದ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಉಪಖಂಡ (5), ಲೆಕ್ಕಪರಿಶೋಧನೆಯ ದರಗಳ ಸಂದಾಯಕ್ಕೆ ಸಂಬಂಧಿಸಿದ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಉಪಖಂಡ (6), ಪ್ರಾಧಿಕಾರದ ವಾರ್ಷಿಕ ಲೆಕ್ಕಪತ್ರಗಳ ವಿವರಪಟ್ಟಿಯನ್ನು ಪ್ರಕಟಿಸುವ ವಿಧಾನಕ್ಕೆ ಸಂಬಂಧಿಸಿದ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 52:** ಪ್ರಾಧಿಕಾರದ ವರದಿಯನ್ನು ಸಲ್ಲಿಸುವುದಕ್ಕಾಗಿ ದಿನಾಂಕಗಳು, ನಮೂನೆ ಮತ್ತು ಅಂತರಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 53:** ನಿಯಮಿಸಿದಂಥ ಯಾವ ದಿನಾಂಕಕ್ಕೆ ಮೊದಲು ಮತ್ತು ಅಂಥ ನಮೂನೆಯಲ್ಲಿ ಪ್ರತಿವರ್ಷ ಪ್ರಾಧಿಕಾರದ ಆಯವ್ಯಯವನ್ನು ಸಿದ್ಧಪಡಿಸುವುದು ಎಂಬ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 55:** (3)ನೇ ಉಪಖಂಡವು, ಅಪೀಲನ್ನು ಸಲ್ಲಿಸುವುದಕ್ಕಾಗಿನ ಶುಲ್ಕ ಸಂದಾಯ, ಸಮಯ ಮತ್ತು ವಿಧಾನಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 58:** (1)ನೇ ಉಪಖಂಡವು, ಸಕ್ಷಮ ಅಧಿಕಾರಿಗಳು ಮತ್ತು ಆತನು ಶಿಕ್ಷಣ ಸಂಸ್ಥೆಗೆ ಪ್ರವೇಶಿಸಿ ಪರಿಶೀಲನೆ ನಡೆಸುವುದಕ್ಕೆ ಷರತ್ತುಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 59:** (1)ನೇ ಉಪಖಂಡವು, ಈ ಅಧಿನಿಯಮದ ಉದ್ದೇಶಗಳ ನಿರ್ವಹಣೆಗಾಗಿ ಪೂರ್ವ ಪ್ರಕಟಣೆಯ ತರುವಾಯ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಎಸ್.ಎ. ರಾಮದಾಸ್**
ವೈದ್ಯಕೀಯ ಶಿಕ್ಷಣ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

***KARNATAKA LEGISLATIVE ASSEMBLY***

***THIRTEENTH LEGISLATIVE ASSEMBLY***

***FIFTEENTH SESSION***

# *THE KARNATAKA NURSING AND PARAMEDICAL SCIENCES EDUCATION (REGULATION) AUTHORITY BILL, 2012*

***(L.A. Bill No. 32 of 2012)***

A Bill to provide for establishment of a Authority for regulation of nursing, paramedical sciences education and for matters connected therewith or incidental thereto.

Whereas it is expedient to provide for the establishment of a Authority for regulation of nursing, paramedical sciences education and for matters connected therewith or incidental thereto.

Be it enacted by the Karnataka State Legislature in the Sixty-Third Year of the Republic of India as follows:-

## *CHAPTER I*

***1. Short title and commencement.-*** (1) This Act may be called the Karnataka Nursing and Paramedical Sciences Education (Regulation) Authority Act, 2012.

(2) It shall come into force on such date as the State Government may, by notification, appoint.

***2. Definitions.-*** In this Act, unless the context otherwise requires,-

(a) 'academic year' means the year beginning on such date as the authority may, by notification, specify with respect to any specified area or with respect to any educational institution or class of educational institutions;

(b) 'approved school' means any school or institution in any specified area imparting education in para medical sciences or nursing education which,-

(i) is under the management of the State Government or a local authority; or

(ii) being under any other management, is recognised by the authority or by an officer authorised by the Authority;

(c) "authority" means, the Karnataka Nursing, Paramedical Sciences Education (Regulation) Authority constituted under section 3;

(d) "backward classes" means any socially and educationally backward classes of citizens recognised by the Government for purposes as the case may be, of clause (4) of Article 15 or clause (4) of Article 16 of the Constitution of India;

(e) "Chairman" means, the Chairman of the Authority;

(f) 'competent authority' means any person or officer of the authority authorised by it, by notification, to perform the functions and discharge the duties of the competent authority under all or any of the provisions of this Act for such area or for such purposes or for such classes of institutions as may be specified in the notification;

(g) "department" means the department of Medical Education;

(h) 'educational agency' in relation to a private educational institution, means any person or body of persons which has established and is administering or proposes to establish and administer or is entrusted with the establishment, management, administration and maintenance of such private educational institution;

(i) "educational institution" means any institution imparting nursing or para medical education and includes a private educational institution but does not include an institution under the direct management of the University or of the Central Government;

(j) "employee" means a person employed in an educational institution;

(k) "governing council" means any person or body of persons permitted or deemed to be permitted under this Act to establish or maintain a private educational institution and includes the governing body, by whatever name called, to which the affairs of the said educational institution are entrusted;

(l) “Local Authority” means the Authority established by the State Government by law for administration of any local area and to function as a Local Self Government;

(m) "Managing Committee" means the individual or the body of individuals entrusted or charged with the management and administration of a private educational institution and where a society, trust, or an association manages more than one such institution, includes the managing committee of each such institution;

(n) “medical education” includes education in modern scientific medicine, in all its branches, Ayurvedic system of medicine, Unani system of medicine, integrated system of medicine, Indigenous medicine, Naturopathy, Siddha or Homeopathy;

(o) "member" means, a member of the Authority;

(p) "minority educational institution" means a private educational institution of its choice established and administered by a minority whether based on religion or language, having the right to do so under clause (1) of Article 30 of the Constitution of India;

(q) “para medical education” means education in auxiliary or allied health sciences in laboratory technologies, ‘X’ ray technologies and includes other courses leading to diploma or certificate courses as may be notified by the Government from time to time;

(r) "private educational institution" means any educational institution imparting nursing and para medical education established and administered or maintained by any person or body of persons, but does not include an educational institution,-

(i) established and administered or maintained by the Central Government or the State Government or any local authority or any other authority designated or sponsored by the Central Government or the State Government;

(ii) established and administered by any University established by law;

(iii) imparting instruction for which there is no approved syllabi or course of studies or Government or University Examination;

(s) “public interest” includes public order, public health, public morality and other similar purposes;

(t) "ragging" means causing, inducing, compelling or forcing a student, whether by way of a practical joke or otherwise, to do any act which detracts from human dignity or violates his person or exposes him to ridicule or to forbear from doing any lawful act, by intimidating., wrongfully restraining, wrongfully confining, or injuring him or by using criminal force to him or by holding out to him any threat of such intimidation, wrongful restraint, wrongful confinement, injury or the use of criminal force;

(u) "recognised educational institution" means an educational institution recognised under this Act and includes one deemed to be recognised thereunder;

(v) “secretary in relation to a private educational institution” means the person, by whatever name called, who under the rules or regulations of the private educational institution is a chief executive entrusted with the management of the affairs of the institution;

(w) "Executive Director" means, the Member-Secretary of the Authority;

(x) "society" includes a society registered under the Karnataka Societies Registration Act, 1960 (Karnataka Act 17 of 1960), or Karnataka Co-operative Societies Act, 1959 or a trust registered under the Bombay Public Trust Act, 1950, or any association of individuals registered under any other law for the time being in force;

(y) "Regulation" means, regulations made under this Act.

## *CHAPTER II*

***3. Constitution of the Authority.-*** (1) As soon as may be, after the commencement of this Act, there shall be established for the purposes of this Act, an Authority for regulation of nursing and paramedical sciences education to be called the Karnataka Nursing and Paramedical Sciences Education (Regulation) Authority with its head-quarters at Bangalore.

(2) The Authority shall be a body corporate by the name aforesaid having perpetual succession and a common seal to contract and shall by the said name sue and be sued.

(3) The Authority shall consist of the following members, namely:-

| | | |
|---|---|---|
| (a) | The Minister incharge of Medical Education | - Chairman |
| (b) | The Secretary to Government incharge of Medical Education | - Vice- Chairman. |
| (c) | The Secretary to Government, Department of Health and Family Welfare | - Ex-officio Member |
| (d) | The Director, Department of Medical Education | - Ex-officio Member |
| (e) | The Registrar, Karnataka Nursing Council | - Ex-officio Member |
| (f) | Two Principals of Nursing schools nominated by the State Government | - Members |
| (g) | Two Principals of Paramedical sciences institutions nominated by the State Government | - Members |
| (h) | The Executive Director | - Member-Secretary |

***4. Term of office and conditions of service.-*** (1) Subject to the pleasure of the State Government, non-official members nominated by the State Government shall hold office for a period of three years.

(2) The member other than an ex-officio member may resign his office by writing under his hand addressed to the State Government but shall continue in office until his resignation is accepted.

(3) A causal vacancy in the office of a non-official member shall be filled by the State Government by nominating another person and the person so nominated shall hold office for the un-expired portion of the term of the office of his predecessor.

(4) The members shall receive such allowances as may be prescribed.

(5) The allowances payable to the members shall be defrayed out of the Fund of the Authority.

(6) No act or proceedings of the Authority shall be invalid by reason only of the existence of any vacancy or defect in the constitution of the Authority.

***5. Disqualification for office of membership.-*** (1) A person shall be disqualified for being appointed as and for being a member, if he,-

(a) has been convicted and sentenced to imprisonment for an offence which in the opinion of the State Government involves moral turpitude; or

(b) is of unsound mind and stands so declared by a competent court; or

(c) is an undischarged insolvent ; or

(d) has been removed or dismissed from service of the Central Government or a State Government or a body or corporation owned or controlled by the Central Government or a State Government; or

(e) has directly or indirectly by himself or his partner any share or interest in any work done by the order of the Authority or in any contract or employment with or under or by or on behalf of the Authority.

(f) is employed as a paid legal practitioner on behalf of the Authority or accepts employment of legal practitioner against the Authority;

(2) A person shall not be disqualified under clauses (e) and (f) of sub-section (1) or be deemed to have any share or interest in any contract or employment within the meaning of the said clause by reason only of his having a share or interest in any newspaper in which any advertisements relating to the affairs of the Authority is inserted.

***6. Removal of member.-*** (1) The State Government shall remove the other member if,-

(a) he becomes subject to any of the disqualifications mentioned in section 5:

Provided that no member shall be removed on the ground that he has become subject to the disqualification mentioned in clause (e) of sub-section (1) of that section, unless he has been given an opportunity of making his representation against the proposal; or

(b) he refuses to act or becomes incapable of acting; or

(c) he without obtaining leave of absence from the Authority absents from three consecutive meetings of the Authority ; or

(d) in the opinion of the State Government he has so abused his position as to render his continuance in office detrimental to the public interest:

Provided that no member shall be removed under this clause unless he has been given an opportunity of making his representation against the proposal.

***7. Executive Director.-*** (1) The Executive Director shall be a whole time officer of the Authority.

(2) The Executive Director shall be appointed by the Government.

(3) No person shall be appointed or hold office of a Executive Director if he has attained the age of 65 years.

(4) The Executive Director shall, subject to the pleasure of the Government, shall hold the office for a period of 4 years, but he shall be eligible for re-appointment:

Provided that, no person shall be appointed as Executive Director for more than two terms:

Provided further that, no Executive Director shall be removed from the office except by an order passed on the ground of misbehavior, mismanagement, incapability or otherwise after due enquiry by a serving or a retired judge of High Court appointed by the Government.

(5) A person who has served for not less than 15 years in Government or Government autonomous Medical Institutions in which not less than 5 years of service as Professor in a Government/Autonomous Medical or Allied Health services shall be eligible to be appointed as Executive Director:

Provided that when an inservice Professor is appointed as Executive Director, his service till retirement may be treated as taken on deputation. His remuneration and terms and conditions of service shall not be varied or altered to his disadvantage.

***8. Officers of the Authority and conditions of service.-*** (1) Subject to such rules as may be prescribed, the State Government or such other officer as the State Government may authorise, may appoint or depute such officers and employees as it may deem necessary for the efficient discharge of its functions.

(2) The recruitment and terms and conditions of service of the officers and servants specified above shall be such as may be prescribed:

Provided that the tenure, remuneration, terms and conditions of service of persons who are on deputation shall be protected and they shall not be varied to their disadvantage.

***9. Meetings of the Authority.-*** (1) The meetings of the Authority shall be convened by the Chairman or by the Executive Director with the prior approval of the Chairman and shall be held at any place within the jurisdiction of the Authority.

(2) The Authority shall meet at least once in every two months.

(3) The Chairman or the Executive Director with the prior approval of the Chairman shall convene a special meeting if the Chairman feels it necessary.

(4) The Authority shall observe such rules of procedure in regard to the transaction of business at its meeting as may be provided by regulations.

(5) Every meeting shall be presided over by the Chairman and if for any reason, the Chairman is unable to attend any meeting, the Vice-Chairman shall preside at the meeting.

(6) Half of the members shall form the quorum.

***10. Proceedings presumed to be good and valid.-*** No disqualification of or defect in the appointment of any person acting as Chairman or member shall be deemed to vitiate any act or proceeding of the Authority if such act or proceeding is otherwise in accordance with the provisions of this Act.

***11. Executive Committee of the Authority.-*** (1) There shall be a Executive Committee of the Authority to carry on day to day business of the Authority.

(2) The Executive Committee shall have the power to transact all business of the Authority and shall report all important matters of the Authority for approval in the next meeting.

(3) The Executive Committee shall consist of the following members, namely:-

| | |
|---|---|
| (1) The Executive Director | : Chairman |
| (2) The Director, Medical Education | : Member |
| (3) The Registrar | : Member – Secretary |

(4) The administrative and financial powers of the Executive Committee shall be such as may be prescribed.

***12. Duties and responsibilities of the Executive Director.-*** (1) The Executive Committee is the final authority to take decision on every matters including finance or administration and other matters concerned regarding the conducting of examination. All matters to the Government shall be addressed by the Executive Director of the Authority.

(2) The Executive Director of the Authority shall exercise the powers of the Executive Committee. The Executive Director of the Authority is responsible for operating the bank accounts jointly with the Registrar.

(3) The Executive Director shall exercise in respect of the office of the Authority, such powers are exercised by "Head of the office" under the State Government and perform the duties as have been given in the rules and regulations. He shall also be responsible for the safety of the property control and management of the office accounts/funds and correspondence and shall see that the office staff attend punctually and generally fulfill all such duties as required by the Authority. He shall be responsible for planning the agenda of the Authority meeting. He shall circulate the proceedings of the meeting to all the members within thirty days after the meeting and initiate action to implement all the decision of the meeting.

(4) The Executive Director shall cause inspection of the para medical institutions, the schools of Nursing/Institutes of Nursing and verify the sanctioned intake, admission of students, approval of the Indian Nursing Council, New Delhi, academic events such as internal assessment marks, implementation of syllabus, availability of faculty and infrastructure, such as library, accommodation, building, etc., as per the guidelines of Indian Nursing Council, New Delhi.

(5) The Executive Director shall call for Authority meeting before the announcement of annual and supplementary examination results and also special meeting when occasion arises.

(6) The Executive Director shall be responsible for timely issue of Diploma Certificates, Marks cards and Verification of certificates received from police department, embassies, Human Resources Department and other allied departments.

(7) The Executive Director shall sign vakalat in all legal matters.

(8) The Executive Director shall be responsible for conducting workshop of nursing/orientation programme pertaining to nursing/para medical examination.

(9) The Executive Director shall be responsible for conducting enquiries on disciplinary proceedings against the Authority officials.

(10) The Executive Director shall prepare bills and sign cheques jointly with the Registrar of the Executive Committee for drawing and disbursement of the amount.

(11) The Executive Director shall be responsible for maintaining of cash book and other financial records as per the Karnataka Financial Code, 1958.

(12) The Executive Director is responsible for cash disbursement to the officials, suppliers and also to the concerned persons.

(13) The Executive Director is responsible for maintenance of records as per office procedure prescribed by the Government of Karnataka.

(14) The Executive Director is responsible for maintenance of stores and stock accounts of the Authority.

(15) The Executive Director is responsible for maintenance of service registers of the staff and the personal files.

(16) When the Executive Director proceeds on long leave/preparatory to retirement/when the vacancy occurs under any circumstances, the Director of Medical Education shall be placed in additional charge till a successor is appointed or till the incumbent returned from leave.

(17) The Executive Director may with prior approval of the Chairman, delegate any of his powers specified above to his subordinates for smooth functioning of the Authority.

***13. Sub-Committee.-***The Authority may for any specific purpose academic matter, examination and evaluation matters constitute a Sub-Committee consisting of such members not exceeding five members from amongst its members, the Secretary of the Authority shall be the Chairman of the Sub-Committee.

***14. Powers and duties of Sub-Committee.-*** (1) The Sub-Committee shall exercise such of the powers and perform such duties of the Authority which are delegated to it by the Authority.

(2) The Sub-Committee shall meet whenever the Executive Director calls the meeting.

(3) The Sub-Committee shall take decisions on urgent matters to review the prompt implementation of the decision of the Authority and suggest on urgent matter for action by the State Government.

(4) The Sub-Committee shall observe such rules of procedure in regard to the transaction of business at its meetings as may be provided by regulations.

***15. Obtaining the services of experts.-*** (1) In order to carry out the purposes of the Act, the Authority if necessary, may obtain the services or assistance of the experts in such manner as it may deems fit.

(2) Honorarium and allowances payable to such experts for the services or assistance so rendered shall be of such an amount as may be prescribed.

## *CHAPTER III*

***16. Objective and aims of the Authority.-*** (1) To provide high standard of nursing and paramedical education and nursing practice in accordance with the objectives as laid down by the Indian Nursing Council, New Delhi.

(2) To provide scope for innovation and elevation of nursing and paramedical education by research and experimentation.

(3) To prepare qualified paramedical staff and nursing staff with skill and ability.

***17. Functions of Authority.-*** (1) To co-ordinate, regulate and bring a uniform standard in para medical education and in nursing education in Karnataka subject to the guidelines of the Indian Nursing Council (INC), New Delhi.

(2) To regulate admission in nursing and paramedical institutions.

(3) To regulate recognition and maintenance of standards in institutions imparting nursing and paramedical education.

(4) To arrange to conduct Diploma Nursing Examination and paramedical courses.

(5) To conduct examinations and to issue marks cards of each years of examination and Diploma certificates to successful candidates.

(6) To maintain and enhance the educational standard of schools of nursing and paramedical sciences by conducting educational programmes orientation workshops and seminars.

(7) To prepare the calendar of events at the beginning of each academic year.

(8) To decide and initiate disciplinary action in case of malpractices, impersonation and illegal activities in the examination.

(9) To appoint the panel of examiners.

(10) To appoint an Auditor for auditing the accounts and also legal adviser.

(11) Selection of examination centers.

***18. Regulation of nursing and paramedical education.-*** (1) The Authority may, regulate nursing and para medical education at all levels in accordance with the provisions of this Act.

(2) The Authority may towards that end,-

(a) establish and maintain educational institutions;

(b) permit any local authority or a private body of persons to establish educational institutions and maintain them according to such specifications as may be prescribed;

(c) recognise educational institutions;

(d) regulate the admission including the minimum or maximum number of persons to be admitted to any course in any educational institution or class of such institutions, and the minimum age for such admission;

(e) prescribe the conditions for eligibility of or admissions to any educational institution or class of such institutions;

(f) permit or establish institutions imparting education in nursing and para medical courses; and

(g) take from time to time such other steps as they may consider necessary or expedient.

***19. Educational institutions to be in accordance with this Act.-*** No educational institution shall be established or maintained otherwise than in accordance with the provisions of this Act or the rules made thereunder.

***20. The Authority to prescribe curricula, etc.-*** (1) Subject to such rules as may be prescribed, the Authority may, in respect of educational institutions, by order specify,-

(a) the curricula, syllabi and text books for any course of instruction;

(b) the duration of such course;

(c) the medium of instruction;

(d) the scheme of examinations and evaluation;

(e) the number of working days and working hours in an academic year;

(f) the rates at which tuition and other fees, building fund or other amount, by whatever name called, may be charged from students or on behalf of students;

(g) the staff pattern (teaching and non-teaching) and the educational and other qualifications for different posts;

(h) the facilities to be provided, such as buildings, sanitary arrangements, playground, furniture, equipment, library, teaching aid, laboratory and workshops;

(i) such other matters as are considered necessary.

(2) The curricula under sub-section (1) may also include schemes in respect of,-

(a) moral and ethical education;

(b) physical education, health education and sports;

(c) socially useful productive work, work experience and social service;

(d) innovative, creative and research activities;

(e) promotion of national integration; and

(f) promotion of civic sense.

(3) The prescription under sub-section (1) may be different for the different categories of educational institutions.

(4) In every recognised educational institution,-

(a) the course of instruction shall conform to the curricula and other conditions under sub-section (1); and

(b) no part of the working hours prescribed shall be utilised for any purpose other than instruction in accordance with the curricula.

## *CHAPTER IV*

## *EDUCATIONAL AUTHORITIES*

***21. Appointment of officers.***- (1) The Authority may appoint the Registrar and such number of officers as may be necessary to assist the Executive Director in the exercise of the powers conferred on and the performance of the functions entrusted to him by or under this Act.

(2) Subject to the provisions of this Act and the general or special orders of the State Government, the Authority made in this behalf, the Executive Director shall be the Chief Controlling Authority in all matters connected with the administration of such part of education in the State as may be allotted by the State Government by an order in this behalf.

(3) All persons employed in the administration of this Act shall be subject to the superintendence, direction and control of the Authority and the officer or officers to whom each officer shall be subordinate shall be determined by the Authority.

## *CHAPTER V*

## *RECOGNITION OF EDUCATIONAL INSTITUTIONS, ETC.*

***22. Recognition.***- (1) Recognition may be accorded to any educational institution registered as a society or a trust.

(2) The granting of recognition shall be subject to fulfillment of the following conditions, namely:-

(a) security deposit of the prescribed amount decided by the Authority shall be made within the time specified;

(b) the Governing Council shall possess or be assured of adequate funds to run the institution on a stable footing; and

(c) such other general or special conditions as may be prescribed in regard to accommodation, appointment of teaching and other staff, the code of conduct as prescribed by the Authority to be accepted and observed by the Governing Council, furniture and equipment, syllabi, text-books and such other matters relating thereto.

**45. 62ನೇ ಪ್ರಕರಣದ ತಿದ್ದುಪಡಿ,** – ಮೂಲ ಅಧಿನಿಯಮದ 62 ನೇ ಪ್ರಕರಣದಲ್ಲಿ, (2) ನೇ ಉಪಪ್ರಕರಣದ ಖಂಡ (**ii**) ರಲ್ಲಿ **"**ಪ್ರತಿ ವರ್ಷ**"** ಎಂಬ ಪದಗಳಿಗೆ, **"**ಪ್ರತಿ ಸಹಕಾರ ವರ್ಷವೂ**"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**46. 62ಎ ಪ್ರಕರಣದ ಸೇರ್ಪಡೆ.** – ಮೂಲ ಅಧಿನಿಯಮದ 62 ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ–

**"62ಎ– ಸಹಕಾರ ಶಿಕ್ಷಣ ಮತ್ತು ತರಬೇತಿ.**– (1) ಪ್ರಕರಣದ 10 ರ (2) ನೇ ಉಪಪ್ರಕರಣದ ಖಂಡ (**xxi**) ರಡಿ ರಚಿತವಾದ ಸಹಕಾರ ಶಿಕ್ಷಣ ನಿಧಿಯನ್ನು ರಾಜ್ಯದಲ್ಲಿರುವ ಸಹಕಾರ ಚಳುವಳಿಯ ಪ್ರೋತ್ಸಾಹನಕ್ಕಾಗಿ ಹಾಗೂ ಸಹಕಾರಿಗಳ ಸದಸ್ಯರಿಗೆ, ನಿರ್ದೇಶಕರಿಗೆ ಮತ್ತು ಸಾರ್ವಜನಿಕರಿಗೆ ಸಹಕಾರ ಶಿಕ್ಷಣ ನೀಡಲು ಮತ್ತು ಸಹಕಾರಿಗಳ ಸಿಬ್ಬಂದಿ ವರ್ಗದವರಿಗೆ ತರಬೇತಿ ನೀಡಲು ಉಪಯೋಗಿಸತಕ್ಕದ್ದು.

(**2**) ಪ್ರತಿ ಸಹಕಾರಿಯು ತನ್ನ ಶಿಕ್ಷಣನಿಧಿ ವಂತಿಗೆಯನ್ನು ಕರ್ನಾಟಕ ರಾಜ್ಯ ಸೌಹಾರ್ದ ಸಂಯುಕ್ತ ಸಹಕಾರಿಗೆ ಪಾವತಿಸತಕ್ಕದ್ದು.

(3) ಸಂಯುಕ್ತ ಸಹಕಾರಿಯು ಸಹಕಾರಿಗಳು ಸಂದಾಯ ಮಾಡಿದ ವಂತಿಗೆಗಳನ್ನು ಹಾಗೂ ಯಾವುದೇ ವ್ಯಕ್ತಿ ಅಥವಾ ಸಂಸ್ಥೆಗಳಿಂದ ಸ್ವೀಕೃತವಾದ ದಾನಗಳನ್ನು ಸಹಕಾರ ಶಿಕ್ಷಣ ನಿಧಿಗೆ ಜಮಾ ಮಾಡತಕ್ಕದ್ದು.

(4) ಪ್ರತಿ ಸಹಕಾರಿಯು ವಾರ್ಷಿಕ ಸಾಮಾನ್ಯ ಸಭೆ ನಡೆದ ದಿನಾಂಕದಿಂದ ಮೂವತ್ತು ದಿನದೊಳಗೆ ಶಿಕ್ಷಣನಿಧಿ ವಂತಿಗೆಯನ್ನು ಸಂಯುಕ್ತ ಸಹಕಾರಿಗೆ ಜಮಾ ಮಾಡತಕ್ಕದ್ದು.

(5) ಸಹಕಾರ ಶಿಕ್ಷಣ ನಿಧಿಯು ಕರ್ನಾಟಕ ರಾಜ್ಯ ಸೌಹಾರ್ದ ಸಂಯುಕ್ತ ಸಹಕಾರಿಯು ಆಡಳಿತದಲ್ಲಿದ್ದು ಅದರಿಂದ ನಿರ್ವಹಿಸಲ್ಪಡತಕ್ಕದ್ದು ಹಾಗೂ ಸದರಿ ನಿಧಿಯ ನಿರ್ವಹಣೆಯ ಕಾರ್ಯವಿಧಾನವು ನಿಯಮಿಸಬಹುದಾದಂತೆ ಇರತಕ್ಕದ್ದು.

(6) ಆ ಉದ್ದೇಶಕ್ಕಾಗಿ ನಿಯಮಿಸಲಾದಂತೆ ರಚಿಸಲಾದ ಸಲಹಾ ಸಮಿತಿಯ ಅನುಮೋದನೆ ಇಲ್ಲದೆ ಸಹಕಾರ ಶಿಕ್ಷಣ ನಿಧಿಯಿಂದ ಯಾವುದೇ ವೆಚ್ಚವನ್ನು ಮಾಡತಕ್ಕದ್ದಲ್ಲ**"**

**47. 63ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 63 ನೇ ಪ್ರಕರಣದಲ್ಲಿ, ಖಂಡ (ಹೆಚ್) ನಲ್ಲಿ, **"**ವರ್ಷ ಮುಕ್ತಾಯವಾಗುವ**"** ಎಂಬ ಪದಗಳಿಗೆ, **"**ಸಹಕಾರ ವರ್ಷ ಮುಕ್ತಾಯವಾದ**"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**48. 63ಎ ಪ್ರಕರಣದ ಸೇರ್ಪಡೆ.**– ಮೂಲ ಅಧಿನಿಯಮದ 63ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ –

**"63ಎ. ಸದಸ್ಯರಿಗೆ ಮಾಹಿತಿ ಒದಗಿಸುವುದು.**– ಸಂಯುಕ್ತ ಸಹಕಾರಿಯು ಪ್ರತಿ ಸದಸ್ಯನು ತನಗೆ ಸಂಬಂಧಪಟ್ಟಂತೆ ತನ್ನ ದೈನಂದಿನ ವ್ಯವಹಾರದಲ್ಲಿ ನಿರ್ವಹಿಸುವ ಲೆಕ್ಕಪುಸ್ತಕಗಳನ್ನು ನೋಡಲು ಹಾಗೂ ತತ್ಸಂಬಂಧದ ಮಾಹಿತಿ ಮತ್ತು ಲೆಕ್ಕಗಳನ್ನು ಪಡೆಯಲು ಅವನಿಗೆ ಅವಕಾಶ ನೀಡತಕ್ಕದ್ದು**"**.

**49. 64 ನೇ ಪ್ರಕರಣದ ಪ್ರತಿಯೋಜನೆ.**– ಮೂಲ ಅಧಿನಿಯಮದ 64 ನೇ ಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ –

**"64 ಲೆಕ್ಕಪರಿಶೋಧನೆ.**– (1) ಸಂಯುಕ್ತ ಸಹಕಾರಿಯು ತನ್ನ ಲೆಕ್ಕಪತ್ರಗಳನ್ನು ಪ್ರತಿ ವರ್ಷದಲ್ಲಿ ಕೊನೇ ಪಕ್ಷ ಒಮ್ಮೆಯಾದರೂ ಲೆಕ್ಕಪರಿಶೋಧನಾ ನಿರ್ದೇಶಕನು ಅನುಮೋದಿಸಿದ ಲೆಕ್ಕಪರಿಶೋಧಕರ ಮತ್ತು ಲೆಕ್ಕಪರಿಶೋಧಿಸುವ ಸಂಸ್ಥೆಗಳ ಪಟ್ಟಿಯಲ್ಲಿರುವ ಹಾಗೂ ಅದರ ಸಾಮಾನ್ಯ ಸದಸ್ಯರ ಸಭೆಯಿಂದ ನೇಮಕವಾದ ಲೆಕ್ಕಪರಿಶೋಧಕರಿಂದ ಅಥವಾ ಲೆಕ್ಕಪರಿಶೋಧಿಸುವ ಸಂಸ್ಥೆಯಿಂದ ಪ್ರತಿ ವರ್ಷ ಸೆಪ್ಟಂಬರ್ ಒಂದರೊಳಗಾಗಿ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.

(2) ಒಂದು ಸಹಕಾರಿಯ ಲೆಕ್ಕಪರಿಶೋಧನೆಗೆ ಸಂಬಂಧಪಟ್ಟ ಪ್ರಕರಣ 33ರ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಸಂಯುಕ್ತ ಸಹಕಾರಿಗೆ ಅನ್ವಯವಾಗತಕ್ಕದ್ದು**"**.

**50. 64ಎ ಪ್ರಕರಣದ ಸೇರ್ಪಡೆ.**– ಮೂಲ ಅಧಿನಿಯಮದ 64 ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ –

**"64ಎ ರಿಜಿಸ್ಟ್ರಾರನಿಗೆ ವಿದ್ಯುಕ್ತ ವರದಿಗಳನ್ನು ನೀಡುವುದು.**– ಸಂಯುಕ್ತ ಸಹಕಾರಿಯು ಸಹಕಾರ ವರ್ಷ ಮುಗಿದ ಆರು ತಿಂಗಳೊಳಗೆ, ಈ ಮುಂದಿನ ವಿದ್ಯುಕ್ತ ವರದಿಗಳನ್ನು ಮತ್ತು ಮಾಹಿತಿಗಳನ್ನು ರಿಜಿಸ್ಟ್ರಾರನಿಗೆ ಸಲ್ಲಿಸತಕ್ಕದ್ದು; ಎಂದರೆ:–

(ಎ) ಹಿಂದಿನ ವರ್ಷದ ಚಟುವಟಿಕೆಗಳ ಬಗ್ಗೆ ವಾರ್ಷಿಕ ವರದಿ ಹಾಗೂ ಮುಂದಿನ ವರ್ಷದ ಕಾರ್ಯಕ್ರಮ;

(ಬಿ) ಅದರ ಪರಿಶೋಧಿತ ಆರ್ಥಿಕ ತ:ಖ್ತೆಗಳು ;

(ಸಿ) ಅದರ ಸಾಮಾನ್ಯ ಸದಸ್ಯರ ಸಭೆಯು ಅನುಮೋದಿಸಿದ ಹೆಚ್ಚುವರಿ ಅಥವಾ ಉಳಿತಾಯ ವಿಲೇವಾರಿಯ ಯೋಜನೆ ;

(ಡಿ) ಸಂಯುಕ್ತ ಸಹಕಾರಿಯ ಉಪವಿಧಿಗಳಿಗೆ ಮಾಡಲಾದ ತಿದ್ದುಪಡಿಗಳು ಇದ್ದಲ್ಲಿ ಅವುಗಳ ಪಟ್ಟಿ ;

(ಇ) ಅದರ ಸಾಮಾನ್ಯ ಸದಸ್ಯರ ಸಭೆಯನ್ನು ನಡೆಸುವ ದಿನಾಂಕ ಮತ್ತು ಅಗತ್ಯವಿದ್ದಾಗ ಚುನಾವಣೆ ನಡೆಸುವ ದಿನಾಂಕದ ಬಗ್ಗೆ ಘೋಷಣೆ;

(ಎಫ್) ನಿರ್ದೇಶಕರುಗಳ ಪಟ್ಟಿ ಮತ್ತು ಅವರ ಪದಾವಧಿ;

(ಜಿ) ಈ ಅಧಿನಿಯಮದ ಉಪಬಂಧಗಳಡಿ ರಿಜಿಸ್ಟ್ರಾರನು ಅಗತ್ಯಪಡಿಸುವ ಇತರೆ ಯಾವುದೇ ಮಾಹಿತಿ.

**51. 68ನೇ ಪ್ರಕರಣದ ತಿದ್ದುಪಡಿ:** ಮೂಲ ಅಧಿನಿಯಮದ 68ನೇ ಪ್ರಕರಣದ (2) ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು; ಎಂದರೆ –

**"**(3) ತನ್ನ ನೌಕರನಿಂದ ಹಣ ಮುರಿದುಕೊಳ್ಳಲು ವಿಫಲನಾದರೆ ಅಥವಾ ಮುರಿದುಕೊಂಡ ಮೊತ್ತವನ್ನು ಅಂತಹ ವ್ಯವಕಲನವನ್ನು ಮಾಡಿದ ದಿನಾಂಕದಿಂದ ಹದಿನಾಲ್ಕು ದಿವಸಗಳ ಅವಧಿಯೊಳಗೆ ಸಂಬಂಧಪಟ್ಟ ಸಹಕಾರಿಗೆ ಸಕಾರಣಗಳಿಲ್ಲದೆ ಸಂದಾಯ ಮಾಡಲು ಉದ್ಯೋಗದಾತನು ತಪ್ಪಿದರೆ ಅವನು ಐದು ಸಾವಿರ ರೂಪಾಯಿಗಳ ಜುಲ್ಮಾನೆಯಿಂದ ಅಥವಾ ಆರು ತಿಂಗಳುಗಳ ಕಾರಾವಾಸದಿಂದ ಅಥವಾ ಇವೆರಡರಿಂದಲೂ ದಂಡಿತನಾಗತಕ್ಕದ್ದು.

(4) ಸಹಕಾರಿಯ ಅಥವಾ ಸಂಯುಕ್ತ ಸಹಕಾರಿಯ ಪಧಾಧಿಕಾರಿ, ಮುಖ್ಯ ಕಾರ್ಯನಿರ್ವಾಹಕ, ಒಬ್ಬ ನಿರ್ದೇಶಕ ಅಥವಾ ಯಾವೊಬ್ಬ ನೌಕರನು ಸಹಕಾರಿಗೆ ಸೇರಿದ ಪುಸ್ತಕಗಳ, ಲೆಕ್ಕಗಳ, ದಸ್ತಾವೇಜುಗಳ, ದಾಖಲೆಗಳ, ನಗದಿನ, ಭದ್ರತೆಗಳ ಮತ್ತು ಇತರ ಸ್ವತ್ತುಗಳ ಸುಪರ್ದನ್ನು ಹೊಂದಿರುವವನು ಅಧಿಕೃತ ವ್ಯಕ್ತಿಗೆ ಅಂತಹ ಸುಪರ್ದನ್ನು ಬುದ್ಧಿಪೂರ್ವಕವಾಗಿ ಒಪ್ಪಿಸದಿದ್ದಲ್ಲಿ ಅಥವಾ ಅಧಿನಿಯಮದ ಉಪಬಂಧಗಳಡಿ ನೀಡಲಾದ ಸಮನು ಅನ್ನು, ಕೋರಿಕೆಯನ್ನು ಅಥವಾ ಕಾನೂನು ಸಮ್ಮತ ಲಿಖಿತ ಆದೇಶವನ್ನು ಯುಕ್ತ ಕಾರಣವಿಲ್ಲದೆ ಪಾಲಿಸದಿದ್ದಲ್ಲಿ, ಅವನು ಹತ್ತು ಸಾವಿರ ರೂಪಾಯಿಗಳ ಜುಲ್ಮಾನೆಯಿಂದ ಅಥವಾ ಎರಡು ವರ್ಷಗಳ ಕಾರಾವಾಸದಿಂದ ಅಥವಾ ಇವೆರಡರಿಂದಲೂ ದಂಡಿತನಾಗತಕ್ಕದ್ದು.

(5) ಯಾವುದೇ ಸಹಕಾರಿಯ ಅಥವಾ ಸಂಯುಕ್ತ ಸಹಕಾರಿಯ ಆಡಳಿತ ಮಂಡಲಿಯು ಮತ್ತು ಮುಖ್ಯ ಕಾರ್ಯನಿರ್ವಾಹಕನು 33ನೇ ಪ್ರಕರಣ ಅಥವಾ 64ನೇ ಪ್ರಕರಣದಡಿ, ಪ್ರಸಂಗಾನುಸಾರ, ಹಿಂದಿನ ವರ್ಷದ ತನ್ನ ಲೆಕ್ಕಪತ್ರಗಳನ್ನು ನಿಗದಿಪಡಿಸಿದ ಅವಧಿಯೊಳಗೆ ಪರಿಶೋಧನೆ ಮಾಡಿಸಲು ಮತ್ತು ಪರಿಶೋಧಿತ ಆರ್ಥಿಕ ತ:ಖ್ತೆಗಳ ಸಹಿತ ಲೆಕ್ಕಪರಿಶೋಧನಾ ವರದಿಯನ್ನು ವಾರ್ಷಿಕ ಸಾಮಾನ್ಯ ಸಭೆಯ ಮುಂದೆ ಮಂಡಿಸಲು ವಿಫಲವಾದರೆ, ಅಂಥ ಸಹಕಾರಿಯ ಅಥವಾ ಸಂಯುಕ್ತ ಸಹಕಾರಿಯ ಆಡಳಿತ ಮಂಡಲಿಯ ಪ್ರತಿಯೊಬ್ಬ ನಿರ್ದೇಶಕನು ಮತ್ತು ಮುಖ್ಯಕಾರ್ಯನಿರ್ವಾಹಕನು ಐದು ಸಾವಿರ ರೂಪಾಯಿಗಳ ಜುಲ್ಮಾನೆಯಿಂದ ಅಥವಾ ಆರು ತಿಂಗಳಗಳ ಕಾರಾಗೃಹವಾಸದಿಂದ ಅಥವಾ ಎರಡರಿಂದಲೂ ದಂಡಿತನಾಗತಕ್ಕದ್ದು.

(6) ಯಾವುದೇ ಸಹಕಾರಿಯ ಅಥವಾ ಸಂಯುಕ್ತ ಸಹಕಾರಿಯ ಆಡಳಿತ ಮಂಡಲಿಯು ಮತ್ತು ಮುಖ್ಯಕಾರ್ಯನಿರ್ವಾಹಕನು ಸಂದರ್ಭಾನುಸಾರ 34ನೇ ಪ್ರಕರಣ ಅಥವಾ 64ಎ ದ ಪ್ರಕರಣದಡಿ ನಿಗದಿಪಡಿಸಿದ ಅವಧಿಯೊಳಗೆ ರಿಜಿಸ್ಟ್ರಾರನಿಗೆ ಹಾಗೂ ಸಂಯುಕ್ತ ಸಹಕಾರಿಗೆ ವಿದ್ಯುಕ್ತ ವರದಿಗಳನ್ನು ಮತ್ತು ಮಾಹಿತಿಯನ್ನು ಸಲ್ಲಿಸಲು ವಿಫಲವಾದರೆ, ಅಂಥ ಸಹಕಾರಿಯ ಅಥವಾ ಸಂಯುಕ್ತ ಸಹಕಾರಿಯ ಆಡಳಿತ ಮಂಡಲಿಯ ಪ್ರತಿಯೊಬ್ಬ ನಿರ್ದೇಶಕನು ಮತ್ತು ಮುಖ್ಯಕಾರ್ಯನಿರ್ವಾಹಕನು ಹತ್ತುಸಾವಿರ ರೂಪಾಯಿಗಳ ಜುಲ್ಮಾನೆಯಿಂದ ಅಥವಾ ಎರಡು ವರ್ಷಗಳ ಕಾರಾಗೃಹವಾಸದಿಂದ ಅಥವಾ ಎರಡರಿಂದಲೂ ದಂಡಿತನಾಗತಕ್ಕದ್ದು.

(7) ಯಾವುದೇ ಸಹಕಾರಿಯ ಅಥವಾ ಸಂಯುಕ್ತ ಸಹಕಾರಿಯ ಆಡಳಿತ ಮಂಡಲಿಯು ಮತ್ತು ಮುಖ್ಯಕಾರ್ಯನಿರ್ವಾಹಕನು ಪ್ರಕರಣ 26 ಮತ್ತು ಪ್ರಕರಣ 58 ರಡಿ ಅಗತ್ಯಪಡಿಸಿದಂತೆ ನಿಗದಿತ ಅವಧಿಯೊಳಗೆ ಚುನಾವಣೆಗಳನ್ನು ನಡೆಸಲು ಬೇಕಾದ ಪುಸ್ತಕಗಳನ್ನು, ದಾಖಲೆಗಳನ್ನು ಮತ್ತು ಮಾಹಿತಿಯನ್ನು ಸಹಕಾರ ಚುನಾವಣಾ ಆಯೋಗಕ್ಕೆ ಸಕಾಲದಲ್ಲಿ ಒದಗಿಸಿ ನೆರವು ನೀಡಲು ವಿಫಲವಾದರೆ, ಅಂತಹ ಸಹಕಾರಿಯ ಅಥವಾ ಸಂಯುಕ್ತ ಸಹಕಾರಿಯ ಆಡಳಿತ ಮಂಡಲಿಯ ಪ್ರತಿಯೊಬ್ಬ ನಿರ್ದೇಶಕನು ಮತ್ತು ಮುಖ್ಯಕಾರ್ಯನಿರ್ವಾಹಕನು ಹತ್ತುಸಾವಿರ ರೂಪಾಯಿಗಳ ಜುಲ್ಮಾನೆಯಿಂದ ಅಥವಾ ಆರು ತಿಂಗಳ ಕಾರಾಗೃಹವಾಸದಿಂದ ಅಥವಾ ಇವೆರಡರಿಂದಲೂ ದಂಡಿತನಾಗತಕ್ಕದ್ದು.

(8) ಯಾವೊಬ್ಬ ವ್ಯಕ್ತಿಯು ಯಾವುದೇ ಸಹಕಾರಿಯ ಅಥವಾ ಸಂಯುಕ್ತ ಸಹಕಾರಿಯ ಆಡಳಿತ ಮಂಡಲಿಯ ಚುನಾವಣೆಗೆ ಪೂರ್ವದಲ್ಲಿ, ಚುನಾವಣೆ ನಡೆಯುವಾಗ ಅಥವಾ ಚುನಾವಣೆಯ ತರುವಾಯದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಸಿ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಭ್ರಷ್ಟ ಆಚರಣೆಯನ್ನು ಅಳವಡಿಸಿದರೆ ಅಥವಾ 39ಕೆ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಚುನಾವಣಾ ಅಪರಾಧವನ್ನು ಎಸಗಿದರೆ, ಅವನು ಹತ್ತು ಸಾವಿರ ರೂಪಾಯಿಗಳ ಜುಲ್ಮಾನೆಯಿಂದ ಅಥವಾ ಎರಡು ವರ್ಷಗಳ ಕಾರಾಗೃಹವಾಸದಿಂದ ಅಥವಾ ಇವರೆಡರಿಂದಲೂ ದಂಡಿತನಾಗತಕ್ಕದ್ದು."

**52.** "**ತೊಂದರೆಗಳನ್ನು ನಿವಾರಿಸುವ ಅಧಿಕಾರ:–** (1) ಈ ತಿದ್ದುಪಡಿ ಅಧಿನಿಯಮದ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು ರಾಜ್ಯಪತ್ರದಲ್ಲಿ ಪ್ರಕಟಿಸುವ ಆದೇಶದ ಮೂಲಕ, ಈ ತೊಂದರೆಯನ್ನು ನಿವಾರಿಸಲು ಅವಶ್ಯವೆಂದು ಅಥವಾ ಯುಕ್ತವೆಂದು ತನಗೆ ಕಂಡುಬರುವಂತಹ ಹಾಗೂ ಮೂಲ ಅಧಿನಿಯಮದ ಮತ್ತು ಸಂವಿಧಾನ (ತೊಂಭತ್ತೇಳನೇ ತಿದ್ದುಪಡಿ) ಅಧಿನಿಯಮ, 2011 ರ ಉಪಬಂಧಗಳಿಗೆ ಅಸಂಗತವಾಗಿರದಂಥ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಪ್ರಕರಣದಡಿ ಅಂಥ ಆದೇಶವನ್ನು ಈ ತಿದ್ದುಪಡಿ ಅಧಿನಿಯಮ ಜಾರಿಗೆ ಬಂದ ದಿನಾಂಕದಿಂದ ಎರಡು ವರ್ಷ ಮುಕ್ತಾಯವಾದ ನಂತರ ಮಾಡತಕ್ಕದ್ದಲ್ಲ.

(2) ಈ ಪ್ರಕರಣದಡಿ ಮಾಡಲಾದ ಪ್ರತಿ ಆದೇಶವನ್ನು ಅದನ್ನು ಹೊರಡಿಸಿದ ಮೇಲೆ ಸಾಧ್ಯವಾದಷ್ಟು ಶೀಘ್ರವಾಗಿ ರಾಜ್ಯ ವಿಧಾನಮಂಡಲದಲ್ಲಿ ಮಂಡಿಸತಕ್ಕದ್ದು."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ 1997 (ಕರ್ನಾಟಕ ಕಾಯ್ದೆ, 17, 2000)ಕ್ಕೆ ಸಂವಿಧಾನದ (97ನೇ ತಿದ್ದುಪಡಿ) ವಿಧೇಯಕ 2011ರ ಉಪಬಂಧಗಳಿಗೆ ಅನುಗುಣವಾಗಿ ತಿದ್ದುಪಡಿಗಳನ್ನು ತರಲು ಉದ್ದೇಶಿಸಿದೆ. ಇದೇ ಸಂದರ್ಭದಲ್ಲಿ ಇತರ ತತ್ಸಂಬಂಧಿ ತಿದ್ದುಪಡಿಗಳನ್ನು ತರಲು ಸಹ ಉದ್ದೇಶಿಸಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ ಯಾವುದೇ ಹೆಚ್ಚಿನ ವೆಚ್ಚ ಉಂಟಾಗುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಕುರಿತು ಜ್ಞಾಪನಪತ್ರ**

| | |
|---|---|
| **ಖಂಡ 18:** | ಮಂಡಲಿಯ ಯಾವೊಬ್ಬ ಸದಸ್ಯನ ವಿರುದ್ಧ ಅವಿಶ್ವಾಸ ಸೂಚನೆಯ ಮಂಡನೆಯ ಪ್ರಕರಣದಲ್ಲಿ ಮತದಾನದ ಕಾರ್ಯವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 24:** | **(i)** (3)ನೇ ಉಪ-ಖಂಡವು, ಲೆಕ್ಕಪರಿಶೋಧಕರು ಮತ್ತು ಲೆಕ್ಕಪರಿಶೋಧನಾ ಫರ್ಮ್‌ಗಳ ಪಟ್ಟಿಯ ತಯಾರಿಕೆಯ ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>**(ii)** (7)ನೇ ಉಪ-ಖಂಡವು, ವಾರ್ಷಿಕ ಆರ್ಥಿಕ ತ:ಖ್ತೆಯ ತಯಾರಿಕೆಯ ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>**(iii)** (11)ನೇ ಉಪ-ಖಂಡವು, ವಿಧಾನಮಂಡಲದ ಮುಂದೆ ಅಪೆಕ್ಸ್ ಸಹಕಾರಿಗಳ ಲೆಕ್ಕಪರಿಶೋಧನ ವರದಿಯನ್ನು ಮಂಡಿಸುವ ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 27:** | (3)ನೇ ಉಪ-ಖಂಡವು, ಆದೇಶವನ್ನು ಯಾರ ವಿರುದ್ಧ ಮಾಡಲಾಗಿದೆಯೋ ಆ ವ್ಯಕ್ತಿಯಿಂದ ಸರ್ ಚಾರ್ಜ್ ವ್ಯವಹರಣೆಗಳ ವೆಚ್ಚವನ್ನು ವಸೂಲು ಮಾಡುವ ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

ಪ್ರಸ್ತಾವಿತ ಶಾಸನಾತ್ಮಕ ಅಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಜಗದೀಶ ಶೆಟ್ಟರ**
ಮುಖ್ಯಮಂತ್ರಿಗಳು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**ಅನುಬಂಧ**

**ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ, 1997ರ(2000ರ ಕರ್ನಾಟಕ ಅಧಿನಿಯಮ ಸಂಖ್ಯೆ17)**
**ಉಧೃತ ಭಾಗ**

***XX*** ***XX*** ***XX***

2. **ಪರಿಭಾಷೆಗಳು** – ಈ ಅಧಿನಿಯಮದಲ್ಲಿ ಸಂದರ್ಭಕ್ಕೆ ಅನ್ಯಥಾ ಅಗತ್ಯವಿದ್ದ ಹೊರತು,–

(ಎ) "ಮಂಡಲಿ" ಎಂದರೆ 24ನೇ ಪ್ರಕರಣದ ಅಡಿ ರಚಿತವಾದ ಸಹಕಾರಿಯ ನಿರ್ದೇಶಕರ ಮಂಡಲಿ ಮತ್ತು ಇದು 53ನೇ ಪ್ರಕರಣದ ಅಡಿ ರಚಿಸಲಾದ ಸಂಯುಕ್ತ ಸಹಕಾರಿಯ ನಿರ್ದೇಶಕರ ಮಂಡಲಿಯನ್ನೂ ಒಳಗೊಳ್ಳುತ್ತದೆ;

***XX*** ***XX*** ***XX***

(ಜೆ) "ಸಹಕಾರಿ ವರ್ಷ ಅಥವಾ ವರ್ಷ" ಎಂದರೆ ಏಪ್ರಿಲ್ 1 ನೇ ದಿನಾಂಕದಿಂದ ಪ್ರಾರಂಭವಾಗುವ ವರ್ಷ;

***XX*** ***XX*** ***XX***

(ಆರ್) "ಸದಸ್ಯ" ಎಂದರೆ ಒಂದು ಸಹಕಾರಿಯು ನೋಂದಣಿಯಾಗುವ ಮೊದಲು ಷೇರು ಬಂಡವಾಳದ ಬಗ್ಗೆ ವಂತಿಗೆ ನೀಡಿರುವ ವ್ಯಕ್ತಿ ಮತ್ತು ಇದರಲ್ಲಿ ಅಂಥ ನೋಂದಣಿಯ ತರುವಾಯ ಅಧಿನಿಯಮ, ನಿಯಮ ಮತ್ತು ಉಪವಿಧಿಗಳ ಅನುಸಾರ ಸದಸ್ಯತ್ವ ಪಡೆದುಕೊಳ್ಳಲಾದ ಒಬ್ಬ ವ್ಯಕ್ತಿ ಒಳಗೊಳ್ಳುತ್ತಾನೆ ಮತ್ತು ಒಬ್ಬ ನಾಮಮಾತ್ರ ಸದಸ್ಯನನ್ನು ಮತ್ತು ಒಬ್ಬ ಸಹ ಸದಸ್ಯನನ್ನೂ ಒಳಗೊಳ್ಳುತ್ತದೆ.

***XX*** ***XX*** ***XX***

(ಎಸ್) "ಪದಾಧಿಕಾರಿ" ಎಂದರೆ ಅಧ್ಯಕ್ಷ ಅಥವಾ ಸಭಾಪತಿ, ಉಪಾಧ್ಯಕ್ಷ ಅಥವಾ ಉಪ-ಸಭಾಪತಿ, ಆಡಳಿತಗಾರ ಮತ್ತು ಸಮಾಪಕ ಮತ್ತು ಇದರಲ್ಲಿ ಉಪವಿಧಿಗಳ ಅನುಸಾರ ಪದಾಧಿಕಾರಿಯ ಅಧಿಕಾರಗಳನ್ನು ಚಲಾಯಿಸಲು ಅಧಿಕೃತಗೊಳಿಸಲಾದ ಮಂಡಲಿಯ ಸದಸ್ಯ ಅಥವಾ ನೌಕರನಲ್ಲದ ಇತರ ಯಾವೊಬ್ಬ ವ್ಯಕ್ತಿ ಒಳಗೊಳ್ಳುತ್ತಾನೆ;

**XX** **XX** **XX**

(ವೈ) **"ಒಕ್ಕೂಟ ಸಹಕಾರಿ"** ಎಂದರೆ 5ನೇ ಪ್ರಕರಣದ ಅಡಿಯಲ್ಲಿ ನೋಂದಾಯಿಸಲಾದ ಐದು ಅಥವಾ ಹೆಚ್ಚಿನ ಸಹಕಾರಿಗಳ ಒಂದು ಸಹಕಾರಿ.

**4. ನೋಂದಣಿ ಮಾಡಬಹುದಾದ ಸಹಕಾರಿಗಳು:**

**XX** **XX** **XX**

(2) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು,–

**XX** **XX** **XX**

(ಎ) ಬೇರೆ ಬೇರೆ ಕುಟುಂಬಗಳಿಗೆ ಸೇರಿದ ಹತ್ತು ಜನರಿಗಿಂತ ಕಡಿಮೆಯಲ್ಲದ ವ್ಯಕ್ತಿಗಳು ಸಹಕಾರಿಯನ್ನು ರಚಿಸಲು ಉದ್ದೇಶಿಸಿದರೆ; ಅಥವಾ

(ಬಿ) ಒಂದು ಸಹಕಾರಿ ಸಂಘವು ಈ ಅಧಿನಿಯಮದ ಅಡಿ ಸಹಕಾರಿಯಾಗಿ ಪರಿವರ್ತಿತವಾಗಲು, ಈ ಸಂಬಂಧದಲ್ಲಿ ಒಂದು ನಿರ್ಣಯವನ್ನು ಅಂಗೀಕರಿಸುವ ಮೂಲಕ ಉದ್ದೇಶಿಸಿದರೆ; ಅಥವಾ

(ಸಿ) ಈ ಅಧಿನಿಯಮದ ಅಡಿ ನೋಂದಾಯಿತವಾದ ಐದು ಅಥವಾ ಅದಕ್ಕೂ ಹೆಚ್ಚಿನ ಸಹಕಾರಿಗಳು ಒಂದು ಒಕ್ಕೂಟ ಸಹಕಾರಿಯಾಗಲು ಈ ಸಂಬಂಧದಲ್ಲಿ ಒಂದು ನಿರ್ಣಯವನ್ನು ಅಂಗೀಕರಿಸುವ ಮೂಲಕ ಉದ್ದೇಶಿಸಿದರೆ,

**XX** **XX** **XX**

## 5. ಸಹಕಾರಿಯ ನೋಂದಣಿಗಾಗಿ ಅರ್ಜಿ –

(1) ಸಹಕಾರಿಯ ನೋಂದಣಿಗಾಗಿ ಅರ್ಜಿಯನ್ನು ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ಅಂಥ ರೀತಿಯಲ್ಲಿ ರಿಜಿಸ್ಟ್ರಾರನಿಗೆ ಸಲ್ಲಿಸತಕ್ಕದ್ದು.

(2) ಅಂಥ ಪ್ರತಿಯೊಂದು ಅರ್ಜಿಯೊಂದಿಗೆ–

**XX** **XX** **XX**

(3) ರಿಜಿಸ್ಟ್ರಾರನಿಗೆ, –

**XX** **XX** **XX**

ಪರಂತು, ಒಂದು ಪ್ರಸ್ತಾವಿತ ಅಥವಾ ಅಸ್ತಿತ್ವದಲ್ಲಿರುವ ಸಹಕಾರಿ ಬ್ಯಾಂಕಿನ ಸಂದರ್ಭದಲ್ಲಿ, ಈ ಪ್ರಕರಣದಲ್ಲಿ ಹೇಳಿರುವಂತೆ ನೋಂದಣಿಯನ್ನು ರಿಜರ್ವ್ ಬ್ಯಾಂಕಿನ ಪೂರ್ವಾನುಮೋದನೆಯೊಡನೆ ಮಾತ್ರ ಮಾಡತಕ್ಕದ್ದು.

**XX** **XX** **XX**

**10. ಉಪವಿಧಿಗಳು –**

**XX** **XX** **XX**

(2) ಪ್ರತಿಯೊಂದು ಸಹಕಾರಿಯ ಉಪವಿಧಿಗಳು ಈ ಮುಂದಿನ ವಿಷಯಗಳಿಗೆ ಉಪಬಂಧ ಕಲ್ಪಿಸತಕ್ಕದ್ದು ಎಂದರೆ,–

**XX** **XX** **XX**

(iiiಎ) ನಾಮಮಾತ್ರ ಸದಸ್ಯರು ಮತ್ತು ಸಹ ಸದಸ್ಯರದ್ದೂ ಸೇರಿದಂತೆ ಸದಸ್ಯತ್ವದ ಹಕ್ಕುಗಳು, ವಿಶೇಷ ಹಕ್ಕುಗಳು, ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳು.

**XX** **XX** **XX**

(x) ಮಂಡಲಿಯ ರಚನೆ ಹಾಗೂ ಪದಾಧಿಕಾರಿಗಳ ಸಂಖ್ಯೆ;

**XX** **XX** **XX**

(xxi) ನಿವ್ವಳ ಲಾಭದಲ್ಲಿ ಮುಖ್ಯವಾಗಿ ಈ ಮುಂದಿನವುಗಳ ಬಗ್ಗೆ ಹಣದ ವಿನಿಯೋಗ,–

(ಎ) ಸಹಕಾರಿಯು ರಚಿಸಿದ ಮೀಸಲು ನಿಧಿಗೆ ಶೇಕಡ ಇಪ್ಪತ್ತೈದು;

(ಬಿ) ಸಹಕಾರಿ ಶಿಕ್ಷಣ ನಿಧಿಗೆ ಶೇಕಡ ಮೂರು, ಇದರಲ್ಲಿ ಶೇಕಡ ಒಂದರಷ್ಟು ಸಂಯುಕ್ತ ಸಹಕಾರಿಯ ಸಹಕಾರಿ ಶಿಕ್ಷಣ ನಿಧಿಗೆ ಮತ್ತು ಬಾಕಿಯನ್ನು ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ನಿಯಮಿತ, ಬೆಂಗಳೂರು ಇದರ ಸಹಕಾರಿ ಶಿಕ್ಷಣ ನಿಧಿಗೆ;

(ಡಿ) ಅನಿರೀಕ್ಷಿತ ನಷ್ಟಗಳು ಅಥವಾ ಸಾದಿಲ್ವಾರು ವೆಚ್ಚಗಳನ್ನು ಭರಿಸಲು ಕಾರ್ಯಾಚರಣಾ ಮೀಸಲಿನ ಬಗ್ಗೆ ಶೇಕಡ ಇಪ್ಪತ್ತು;

(ಇ) ಸಾಮಾನ್ಯ ನಿಕಾಯವು ಅನುಮೋದಿಸಿರುವ ಉದ್ದೇಶಕ್ಕಾಗಿ ಸಾಮಾನ್ಯ ಕ್ಷೇಮ ನಿಧಿಗೆ ಶೇಕಡ ಐದು;

(ಎಫ್) ನೌಕರರಿಗೆ ಸಂದಾಯ ಮಾಡಬೇಕಾದ ಎರಡು ತಿಂಗಳ ವೇತನವನ್ನು ಮೀರದ ಬೋನಸ್ಸು;

(ಜಿ) ಸದಸ್ಯರಿಗೆ ಲಾಭಾಂಶ;

***XX*** ***XX*** ***XX***

**20. ಸದಸ್ಯನನ್ನಾಗಿ ಸೇರಿಸಿಕೊಳ್ಳಬಹುದಾದ ಮತ್ತು ಮುಂದುವರೆಸಬಹುದಾದ ವ್ಯಕ್ತಿಗಳು.–**

***XX*** ***XX*** ***XX***

**(2) ಯಾವನೇ ವ್ಯಕ್ತಿಯು,–**

(ಎ) ಸಹಕಾರಿಯ ಉಪವಿಧಿಯಲ್ಲಿ ನಿರ್ದಿಷ್ಟಪಡಿಸಿರುವ ಕನಿಷ್ಠಮಟ್ಟದ ಸಹಕಾರಿಯ ಸೇವೆಯನ್ನು ಸತತ ಎರಡು ವರ್ಷಗಳವರೆಗೆ ಬಳಸಿಕೊಂಡಿಲ್ಲದಿದ್ದರೆ; ಅಥವಾ

(ಬಿ) ಸಹಕಾರಿಯ ಮೂರು ನಿರಂತರ ಸಾಮಾನ್ಯ ಸಭೆಗಳಿಗೆ ಹಾಜರಾಗಿಲ್ಲದಿದ್ದರೆ ಮತ್ತು ಅಂಥ ಗೈರು ಹಾಜರಿಗೆ ಸಾಮಾನ್ಯ ನಿಕಾಯದ ಅನುಮತಿಯನ್ನು ಪಡೆಯದಿದ್ದರೆ; ಅಥವಾ

(ಸಿ) ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿರುವ ಮೊತ್ತ ಮತ್ತು ಅವಧಿಯನ್ನು ಮೀರಿ ಸಹಕಾರಿಗೆ ಮಾಡಬೇಕಾದ ಯಾವುದೇ ಸಂದಾಯವನ್ನು ಮಾಡಲು ವಿಫಲನಾದರೆ,

– ಅಂಥ ವ್ಯಕ್ತಿಯು ಸದಸ್ಯನಾಗಿ ಮುಂದುವರೆಯಲು ಅರ್ಹನಾಗಿರತಕ್ಕದ್ದಲ್ಲ.

***XX*** ***XX*** ***XX***

**21. ಸದಸ್ಯತ್ವವನ್ನು ತೆಗೆದು ಹಾಕುವುದು –**

(1) ಹಾಜರಿದ್ದು ಮತ ನೀಡುವ ಸದಸ್ಯರ ಮೂರನೆ ಎರಡರಷ್ಟಕ್ಕಿಂತ ಕಡಿಮೆಯಿಲ್ಲದ ಸದಸ್ಯರ ಬಹುಮತದಿಂದ ಅಂಗೀಕರಿಸಿದ ನಿರ್ಣಯದ ಮೂಲಕ ಮಂಡಲಿಯು ಸಹಕಾರಿಯ ಹಿತಾಸಕ್ತಿಗೆ ಹಾನಿಕರವಾದ ಕೃತ್ಯ ಅಥವಾ ಕರ್ತವ್ಯಲೋಪಗಳಿಗಾಗಿ ಒಬ್ಬ ವ್ಯಕ್ತಿಯ ಸದಸ್ಯತ್ವವನ್ನು ತೆಗೆದುಹಾಕಬಹುದು :

ಪರಂತು ಈ ಸಂಬಂಧವಾಗಿ ಮನವಿಯನ್ನು ಸಲ್ಲಿಸಲು ಒಬ್ಬ ಸದಸ್ಯನಿಗೆ ಸೂಕ್ತ ಅವಕಾಶ ನೀಡದ ಹೊರತು ಅಂಥ ವ್ಯಕ್ತಿಯ ಸದಸ್ಯತ್ವವನ್ನು ತೆಗೆದುಹಾಕತಕ್ಕದ್ದಲ್ಲ.

(2) ಮಂಡಲಿಯು ಒಬ್ಬ ವ್ಯಕ್ತಿಯ ಸದಸ್ಯತ್ವವನ್ನು ತೆಗೆದುಹಾಕಿದರೆ ಸಾಮಾನ್ಯ ನಿಕಾಯಕ್ಕೆ ಮನವಿಯನ್ನು ಸಲ್ಲಿಸತಕ್ಕದ್ದು ಮತ್ತು ಸಾಮಾನ್ಯ ನಿಕಾಯದ ತೀರ್ಮಾನ ಅಂತಿಮವಾಗಿರತಕ್ಕದ್ದು.

(3) ಸದಸ್ಯತ್ವದಿಂದ ತೆಗೆದುಹಾಕಲಾದ ಒಬ್ಬ ವ್ಯಕ್ತಿಯು, ಈ ಅಧಿನಿಯಮದ, ನಿಯಮಗಳ ಮತ್ತು ಉಪವಿಧಿಗಳ ಉಪಬಂಧಗಳಿಗೊಳಪಟ್ಟು ಹಾಗೆ ತೆಗೆದುಹಾಕಿದಂಥ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಈ ಸಹಕಾರಿಯ ಸದಸ್ಯನಾಗಿ ಮರುಪ್ರವೇಶ ಪಡೆಯಲು ಅನರ್ಹವಾಗಿರಕತ್ಕದ್ದು.

(4) ಹಾಗೆ ತೆಗೆದುಹಾಕಿದ್ದಾಗ್ಯೂ ಮಾಜಿ ಸದಸ್ಯನು, ಹಾಗೆ ತಾನು ಸದಸ್ಯನಾಗಿದ್ದಾಗ ಮಾಡಿದ ಕೃತ್ಯಗಳಿಗಾಗಿ ಅಥವಾ ಲೋಪಗಳಿಗಾಗಿ, ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಅಥವಾ ಉಪವಿಧಿಗಳ ಅಡಿಯಲ್ಲಿ, ತನ್ನ ವಿರುದ್ಧ ವ್ಯವಹರಣೆಗೆ ಗುರಿಯಾಗತಕ್ಕದ್ದು.

**21ಎ. ನಾಮಮಾತ್ರ ಸದಸ್ಯರು ಮತ್ತು ಸಹ ಸದಸ್ಯರು.–**

(1) 20ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಒಂದು ಸಹಕಾರಿಯು,–

(ಎ) ಯಾವೊಬ್ಬ ವ್ಯಕ್ತಿಯನ್ನು,

(ಬಿ) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ಅಥವಾ ಅದರ ಅಡಿಯಲ್ಲಿ ರಚಿತವಾದ ಯಾವುದೇ ಫರ್ಮ್, ಕಂಪನಿ, ಸಹಕಾರ ಸಂಘ, ಸಹಕಾರಿ ಅಥವಾ ಯಾವುದೇ ನಿಕಾಯ ಅಥವಾ ನಿಗಮವನ್ನು,

ಉಪವಿಧಿಯಲ್ಲಿ ನಮೂದಿಸಬಹುದಾದ ಯಾವುದೇ ನಿರ್ದಿಷ್ಟ ಉದ್ದೇಶಕ್ಕಾಗಿ, ಯಾವುದೇ ನಿರ್ದಿಷ್ಟ ಅವಧಿಗಾಗಿ ನಾಮಮಾತ್ರ ಸದಸ್ಯ ಅಥವಾ ಸಹ ಸದಸ್ಯ ಎಂದು ಸೇರಿಸಿಕೊಳ್ಳಬಹುದು.

(2) ನಾಮಮಾತ್ರ ಸದಸ್ಯನು, ಸಹಕಾರಿಯ ಆಸ್ತಿಗಳಲ್ಲಿ ಅಥವಾ ಲಾಭಗಳಲ್ಲಿ ಯಾವುದೇ ರೂಪದಲ್ಲಿ ಯಾವುದೇ ಷೇರಿಗೆ ಹಕ್ಕುಳ್ಳವನಾಗಿರತಕ್ಕದ್ದಲ್ಲ ಮತ್ತು ಸಹಕಾರಿಯ ಒಬ್ಬ ಪದಾಧಿಕಾರಿಯಾಗಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

(3) ಸಹ ಸದಸ್ಯನು ಷೇರುಗಳನ್ನು ಹೊಂದಿರಬಹುದು ಆದರೆ, ಸಹಕಾರಿಯ ಒಬ್ಬ ಪದಾಧಿಕಾರಿಯಾಗಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

(4) ನಾಮಮಾತ್ರ ಸದಸ್ಯ ಅಥವಾ ಸಹ ಸದಸ್ಯನು ಸಹಕಾರಿಯ ವ್ಯವಸ್ಥಾಪನೆಯಲ್ಲಿ ಭಾಗವಹಿಸಲು ಮತ್ತು ಸಹಕಾರಿಯ ಮಂಡಳಿಗೆ ನಡೆಯುವ ಚುನಾವಣೆಯೂ ಸೇರಿದಂತೆ ಸಹಕಾರಿಯ ಯಾವುದೇ ಸಭೆಯಲ್ಲಿ ಮತ ಚಲಾಯಿಸಲು ಹಕ್ಕು ಹೊಂದಿರತಕ್ಕದ್ದಲ್ಲ.

(5) ಈ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಉಳಿದು, ಒಬ್ಬ ನಾಮಮಾತ್ರ ಸದಸ್ಯ ಅಥವಾ ಸಹ ಸದಸ್ಯನು, ಸಹಕಾರಿಯ ಉಪ–ವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಒಬ್ಬ ಸದಸ್ಯನು ಹೊಂದಿರುವ ವಿಶೇಷಾಧಿಕಾರಗಳನ್ನೂ ಮತ್ತು ಹಕ್ಕುಗಳನ್ನೂ ಹೊಂದಿರತಕ್ಕದ್ದು ಮತ್ತು ಸದಸ್ಯನ ಹೊಣೆಗಾರಿಕೆಗಳಿಗೆ ಒಳಪಟ್ಟಿರತಕ್ಕದ್ದು.

***xx*** ***xx*** ***xx***

**23. ಸಾಮಾನ್ಯ ನಿಕಾಯ –**

***xx*** ***xx*** ***xx***

(3) ಈ ಅಧಿನಿಯಮದ, ನಿಯಮಗಳ ಮತ್ತು ಉಪವಿಧಿಗಳ ಇತರ ಉಪಬಂಧಗಳಿಗೊಳಪಟ್ಟು ಸಾಮಾನ್ಯ ನಿಕಾಯವು ಈ ಮುಂದಿನ ವಿಷಯಗಳ ಬಗ್ಗೆ ವ್ಯವಹರಿಸತಕ್ಕದ್ದು, ಎಂದರೆ–

(ಎ) ಮಂಡಲಿಯು ಸಲ್ಲಿಸಿದ ವಾರ್ಷಿಕ ವರದಿಯ ಪರಿಗಣನೆ;

(ಬಿ) ಲೆಕ್ಕ ಪರಿಶೋಧಕರ, ಚಾರ್ಟರ್ಡ್ ಅಕೌಂಟೆಂಟುಗಳ ಮತ್ತು ಆಂತರಿಕ ಲೆಕ್ಕ ಪರಿಶೋಧಕರ ನೇಮಕ ಮತ್ತು ಅವರನ್ನು ತೆಗೆದುಹಾಕುವುದು;

(ಸಿ) ಲೆಕ್ಕ ಪರಿಶೋಧಕರ ವರದಿ ಮತ್ತು ಲೆಕ್ಕ ಪರಿಶೋಧಿತ ತಃಖ್ತೆಗಳ ಪರಿಗಣನೆ;

(ಡಿ) ಲೆಕ್ಕ ಪರಿಶೋಧನೆಯ ಪಾಲನಾ ವರದಿಯ ಪರಿಗಣನೆ;

(ಇ) ನಿವ್ವಳ ಲಾಭವನ್ನು ವಿಲೆ ಮಾಡುವುದು;

***xx*** ***xx*** ***xx***

(ಹೆಚ್) ವಾರ್ಷಿಕ ಬಜೆಟ್ಟಿನ ಅನುಮೋದನೆ;

***xx*** ***xx*** ***xx***

(ಕೆ) ಮಂಡಲಿಯ ನಿರ್ದೇಶಕರುಗಳ ಚುನಾವಣೆ;

(ಎಲ್) ಮಂಡಲಿಯ ನಿರ್ದೇಶಕರುಗಳನ್ನು ತೆಗೆದುಹಾಕುವುದು ಮತ್ತು ಆಕಸ್ಮಿಕ ರಿಕ್ತತೆಯನ್ನು ಭರ್ತಿ ಮಾಡುವುದು;

***xx*** ***xx*** ***xx***

(ಪಿ) ಮಂಡಲಿಯಿಂದ ಯಾವ ವ್ಯಕ್ತಿಯ ಸದಸ್ಯತ್ವದ ಅರ್ಜಿಯನ್ನು ನಿರಾಕರಿಸಲಾಗಿದೆಯೋ ಅಥವಾ ಯಾರ ಸದಸ್ಯತ್ವವನ್ನು ತೆಗೆದುಹಾಕಲಾಗಿದೆಯೋ ಆ ವ್ಯಕ್ತಿಯು ಸಲ್ಲಿಸಿದ ಅಪೀಲು ಯಾವುದಾದರೂ ಇದ್ದಲ್ಲಿ ಅದರ ಪರಿಗಣನೆ;

***xx*** ***xx*** ***xx***

(ಟಿ) ಹಿಂದಿನ ವರ್ಷದಲ್ಲಿ ಸದಸ್ಯರನ್ನು ಸೇರಿಸಿಕೊಂಡ ಮತ್ತು ತೆಗೆದುಹಾಕಿದ ಬಗೆಗಿನ ಸಂಕ್ಷಿಪ್ತ ವರದಿ;

***xx*** ***xx*** ***xx***

**24. ಮಂಡಲಿ –**

(1) ಪ್ರತಿಯೊಂದು ಸಹಕಾರಿಯು ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸಂಖ್ಯೆಯ ನಿರ್ದೇಶಕರುಗಳನ್ನು ಒಳಗೊಂಡ ಒಂದು ಮಂಡಲಿಯನ್ನು ಹೊಂದಿರತಕ್ಕದ್ದು. ಪ್ರಾಥಮಿಕ ಸಹಕಾರಿಗಳ ಸಂದರ್ಭದಲ್ಲಿ ಅಂಥ ಸಂಖ್ಯೆಯು, ಮುಖ್ಯ ಕಾರ್ಯನಿರ್ವಾಹಕನನ್ನು ಹೊರತುಪಡಿಸಿ, ಒಂಭತ್ತಕ್ಕಿಂತ ಕಡಿಮೆಯಿರತಕ್ಕದ್ದಲ್ಲ ಮತ್ತು ಹದಿನೈದಕ್ಕಿಂತ ಹೆಚ್ಚಾಗಿರತಕ್ಕದ್ದಲ್ಲ.

(2) ನಿರ್ದೇಶಕರುಗಳ ಪದಾವಧಿಯು ಪದಧಾರಣೆ ಮಾಡಿದ ದಿನಾಂಕದಿಂದ ಐದು ವರ್ಷಗಳಾಗಿರತಕ್ಕದ್ದು ಮತ್ತು ಇಡೀ ಮಂಡಲಿಗೆ ಚುನಾವಣೆ ನಡೆಸತಕ್ಕದ್ದು.

ವಿವರಣೆ – ಮಂಡಲಿಗೆ ಚುನಾವಣೆಯನ್ನು ವರ್ಷದ ಮಧ್ಯದಲ್ಲಿ ನಡೆಸಲಾಗಿದ್ದರೆ ಆ ವರ್ಷದ ಉಳಿದ ಭಾಗವನ್ನು ಒಂದು ಪೂರ್ಣ ವರ್ಷವೆಂದು ಭಾವಿಸತಕ್ಕದ್ದು.

**25. ನಿರ್ದೇಶಕನಾಗಿ ಚುನಾಯಿತನಾಗಲು ಅಥವಾ ಮುಂದುವರೆಯಲು ಇರುವ ಅನರ್ಹತೆ–**

(1) ಒಬ್ಬ ವ್ಯಕ್ತಿಯು,–

***xx*** ***xx*** ***xx***

–ಅಂಥ ವ್ಯಕ್ತಿಯು ನಿರ್ದೇಶಕನಾಗಿ ಚುನಾಯಿತನಾಗಲು ಅಥವಾ ಮುಂದುವರೆಯಲು ಅನರ್ಹನಾಗತಕ್ಕದ್ದು.

(2) ನಿರ್ದೇಶಕರುಗಳೆಲ್ಲರೂ, ಸಹಕಾರಿಯ ನಿರ್ದೇಶಕರ ಹುದ್ದೆಯ ಪದಾವಧಿಯಲ್ಲಿ–

(ಎ) ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಲಾಗಿರುವ ಸಮಯದೊಳಗೆ ಮತ್ತು 24ನೇ ಪ್ರಕರಣದಲ್ಲಿ ಗೊತ್ತುಪಡಿಸಲಾದ ಅವಧಿ ಮುಕ್ತಾಯವಾಗುವುದಕ್ಕೆ ಮೊದಲು ಚುನಾವಣೆಗಳನ್ನು ನಡೆಸದಿದ್ದರೆ; ಅಥವಾ

(ಬಿ) ವರ್ಷ ಮುಕ್ತಾಯವಾದ ಆರು ತಿಂಗಳಿನೊಳಗೆ ವಾರ್ಷಿಕ ಸಾಮಾನ್ಯ ಸಭೆಯನ್ನು ನಡೆಸದಿದ್ದರೆ ಅಥವಾ 30ನೇ ಪ್ರಕರಣದಲ್ಲಿ ಗೊತ್ತುಪಡಿಸಲಾದ ಸಮಯದೊಳಗೆ ನಡೆಸಲು ಕೋರಲಾದ ಸಾಮಾನ್ಯ ನಿಕಾಯದ ಸಭೆಯನ್ನು ನಡೆಸದಿದ್ದರೆ; ಅಥವಾ

(ಸಿ) ವಾರ್ಷಿಕ ಸಾಮಾನ್ಯ ಸಭೆಯಲ್ಲಿ ಲೆಕ್ಕಪರಿಶೋಧಕರ ವರದಿಯೊಂದಿಗೆ ಹಿಂದಿನ ವರ್ಷದ ಲೆಕ್ಕಪರಿಶೋಧನೆ ಮಾಡಲಾದ ಲೆಕ್ಕಪತ್ರಗಳನ್ನು ಮಂಡಿಸದಿದ್ದರೆ,

–ಅನರ್ಹತೆಗೆ ಗುರಿಯಾಗತಕ್ಕದ್ದು ಮತ್ತು ಹಾಗೆ ಅನರ್ಹತೆಗೆ ಗುರಿಯಾದ ದಿನಾಂಕದಿಂದ ಐದು ವರ್ಷಗಳ ಅವಧಿಯವರೆಗೆ ಒಂದು ಸಹಕಾರಿಯ ನಿರ್ದೇಶಕರಾಗಿ ಚುನಾಯಿತರಾಗಲು ಮತ್ತು ಆ ಸಹಕಾರಿಯ ಅಥವಾ ಇತರ ಯಾವುದೇ ಸಹಕಾರಿಯ ನಿರ್ದೇಶಕರಾಗಿ ಮುಂದುವರಿಯಲೂ ಸಹ ಅನರ್ಹರಾಗಿರತಕ್ಕದ್ದು.

***XX*** ***XX*** ***XX***

**26. ಮಂಡಲಿಯ ಚುನಾವಣೆ–**

(1) ಸಹಕಾರಿಯ ಮಂಡಲಿಯು ನಿಯಮಿಸಲಾದ ವಿಧಾನದಲ್ಲಿ, ನಿರ್ಗಮಿಸುತ್ತಿರುವ ಮಂಡಲಿಯ ಪದಾವಧಿ ಮುಕ್ತಾಯವಾಗುವುದಕ್ಕೆ ಮೊದಲು, ಮುಂದಿನ ಮಂಡಲಿಯನ್ನು ಚುನಾಯಿಸಲು ಚುನಾವಣೆಯನ್ನು ನಡೆಸತಕ್ಕದ್ದು.

ಪರಂತು, ಸಹಕಾರಿಯಾಗಿ ಸಹಕಾರ ಸಂಘವೊಂದು ಪರಿವರ್ತನೆಗೊಂಡು ನೋಂದಣಿಯಾಗಿರುವಂಥ ಸಹಕಾರಿಯನ್ನು ಹೊರತುಪಡಿಸಿ, ನೋಂದಣಿಯ ತರುವಾಯ ಸಹಕಾರಿಯ ಪ್ರಥಮ ಸಾಮಾನ್ಯ ಸಭೆಯು, ಅದರ ನೋಂದಣಿಯ ದಿನಾಂಕದಿಂದ ಒಂದು ತಿಂಗಳೊಳಗೆ, ಮಂಡಳಿಯನ್ನು ಚುನಾಯಿಸಲು, ನಡೆಯತಕ್ಕದ್ದು ಮತ್ತು ಮುಖ್ಯ ಪ್ರವರ್ತಕನು ಅಂಥ ಸಭೆ ನಡೆಸಲು ವ್ಯವಸ್ಥೆ ಮಾಡತಕ್ಕದ್ದು.

ಮತ್ತು ಪರಂತು, ಸಹಕಾರ ಸಂಘವೊಂದು ಸಹಕಾರಿಯಾಗಿ ಪರಿವರ್ತನೆಯಾಗಿ ನೊಂದಣಿಯಾದ ತರುವಾಯ ಅದರ ಪ್ರಥಮ ಸಾಮಾನ್ಯ ಸಭೆಯನ್ನು, ಮಂಡಳಿಯನ್ನು ಚುನಾಯಿಸಲು, ಅದು ನೋಂದಣಿಯಾದ ದಿನಾಂಕದಿಂದ ಅರವತ್ತು ದಿನಗಳೊಳಗೆ ನಡೆಸತಕ್ಕದ್ದು ಮತ್ತು ಮುಖ್ಯ ಕಾರ್ಯನಿರ್ವಾಹಕನು ಅಂಥ ಸಭೆಯನ್ನು ನಡೆಸಲು ವ್ಯವಸ್ಥೆ ಮಾಡತಕ್ಕದ್ದು

(2) ನಿರ್ದೇಶಕರುಗಳ ಪದಾವಧಿ ಮುಕ್ತಾಯವಾಗುವುದಕ್ಕೆ ಮೊದಲು ಮಂಡಲಿಗೆ ಚುನಾವಣೆಗಳನ್ನು ನಡೆಸುವ ಬಗ್ಗೆ ಮಂಡಲಿಯು ಅವಶ್ಯಕ ಕ್ರಮಗಳನ್ನು ಕೈಗೊಳ್ಳದಿರುವಲ್ಲಿ, ರಿಜಿಸ್ಟ್ರಾರನು ಅಂಥ ಚುನಾವಣೆಯನ್ನು ನಡೆಸಲು ಮೂರು ತಿಂಗಳುಗಳಿಗೆ ಮೀರದಂಥ ಅವಧಿಗೆ ಒಬ್ಬ ಆಡಳಿತಗಾರನನ್ನು ನೇಮಕ ಮಾಡತಕ್ಕದ್ದು.

(3) ನಿರ್ದೇಶಕರುಗಳ ಚುನಾವಣೆಗಳನ್ನು ಸಾಮಾನ್ಯ ಸಭೆಯಲ್ಲಿ ರಹಸ್ಯ ಮತದಾನದ ಮೂಲಕ ನಡೆಸತಕ್ಕದ್ದು.

(4) ಹೊಸದಾಗಿ ಚುನಾಯಿತರಾದ ನಿರ್ದೇಶಕರುಗಳು, ನಿರ್ಗಮಿಸುತ್ತಿರುವ ನಿರ್ದೇಶಕರುಗಳ ಪದಾವಧಿ ಮುಕ್ತಾಯವಾದ ಕೂಡಲೇ ಪದಧಾರಣ ಮಾಡತಕ್ಕದ್ದು.

***XX*** ***XX*** ***XX***

**27. ಮಂಡಲಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು –**

***XX*** ***XX*** ***XX***

(ಹೆಚ್) ಲೆಕ್ಕಪರಿಶೋಧನೆ ಮತ್ತು ಪಾಲನಾ ವರದಿಗಳನ್ನು ಪರಿಶೀಲಿಸಲು ಮತ್ತು ಅವುಗಳನ್ನು ಸಾಮಾನ್ಯ ನಿಕಾಯದ ಮುಂದೆ ಮಂಡಿಸಲು;

***XX*** ***XX*** ***XX***

**28. ಪದಾಧಿಕಾರಿಗಳನ್ನು ಚುನಾಯಿಸುವುದು –**

(1) ಮುಖ್ಯ ಕಾರ್ಯನಿರ್ವಾಹಕನು, ಮಂಡಲಿಯ ಚುನಾವಣೆಯ ದಿನಾಂಕದಿಂದ ಹದಿನೈದು ದಿನಗಳೊಳಗೆ ಮತ್ತು ಅಧ್ಯಕ್ಷ ಅಥವಾ ಸಭಾಪತಿ ಮತ್ತು ಉಪಾಧ್ಯಕ್ಷ ಅಥವಾ ಉಪ–ಸಭಾಪತಿಯ ಪದಾವಧಿಯ ಮುಕ್ತಾಯಕ್ಕೂ ನಿಕಟಪೂರ್ವದಲ್ಲಿ ಸಹಕಾರಿಯ ಉಪವಿಧಿಗಳಡಿ ಚುನಾಯಿಸಲು ಅಗತ್ಯಪಡಿಸಲಾದಂತೆ ಅಧ್ಯಕ್ಷರು ಅಥವಾ ಸಭಾಪತಿ, ಉಪಾಧ್ಯಕ್ಷರು ಅಥವಾ ಉಪ–ಸಭಾಪತಿಯನ್ನು ಮತ್ತು ಅಂಥ ಇತರ ಪದಾಧಿಕಾರಿಗಳನ್ನು ಚುನಾಯಿಸುವ ಉದ್ದೇಶಕ್ಕಾಗಿ ಮಂಡಲಿಯ ಎಲ್ಲ ಚುನಾಯಿತ ಸದಸ್ಯರುಗಳ ಸಭೆಯನ್ನು ನಿಯಮಿಸಲಾದ ವಿಧಾನದಲ್ಲಿ ಕರೆಯತಕ್ಕದ್ದು. ಅಧ್ಯಕ್ಷ ಅಥವಾ ಸಭಾಪತಿ ಹಾಗೂ ಉಪಾಧ್ಯಕ್ಷ ಅಥವಾ ಉಪ–ಸಭಾಪತಿಯ ಹುದ್ದೆಗೆ ಸ್ಪರ್ಧಿಸದ ಚುನಾಯಿತ ಸದಸ್ಯನೊಬ್ಬನನ್ನು ಅಂಥ ಸಭೆಗಳಲ್ಲಿ ಅಧ್ಯಕ್ಷತೆ ವಹಿಸಲು ಆಯ್ಕೆ ಮಾಡತಕ್ಕದ್ದು :

ಪರಂತು, ಒಂದು ಸಹಕಾರಿಯು ನೋಂದಣಿಯಾದ ಕೂಡಲೇ ನಡೆಯುವ ಪದಾಧಿಕಾರಿಗಳ ಚುನಾವಣೆಯಲ್ಲಿ ಪದಾಕಾರಿಗಳ ಚುನಾವಣೆಗೆ ಅಭ್ಯರ್ಥಿಯಾಗಿರದ ಚುನಾಯಿತ ನಿರ್ದೇಶಕರುಗಳಲ್ಲಿ ಒಬ್ಬನನ್ನು ಮಂಡಲಿಯ ಪ್ರಥಮ ಸಭೆಯ ಅಧ್ಯಕ್ಷತೆ ವಹಿಸಲು ಆಯ್ಕೆ ಮಾಡತಕ್ಕದ್ದು :

ಮತ್ತೂ ಪರಂತು ಪದಾಧಿಕಾರಿಗಳ ಚುನಾವಣೆಯಲ್ಲಿ, ಒಂದು ವೇಳೆ ಎಲ್ಲ ಚುನಾಯಿತ ನಿರ್ದೇಶಕರು ಅಭ್ಯರ್ಥಿಗಳಾಗಿದ್ದಲ್ಲಿ, ಮುಖ್ಯ ಕಾರ್ಯನಿರ್ವಾಹಕನು ಅಂಥ ಮಂಡಲಿಯ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು.

***XX*** ***XX*** ***XX***

(3) ಅಧ್ಯಕ್ಷ ಅಥವಾ ಸಭಾಪತಿ, ಉಪಾಧ್ಯಕ್ಷ ಅಥವಾ ಉಪಸಭಾಪತಿಯ ಪದಾವಧಿಯು ಚುನಾವಣೆ ದಿನಾಂಕದಿಂದ ಎರಡೂವರೆ ವರ್ಷಗಳಾಗಿರತಕ್ಕದ್ದು.

ವಿವರಣೆ – ಅಧ್ಯಕ್ಷ ಅಥವಾ ಸಭಾಪತಿ, ಉಪಾಧ್ಯಕ್ಷ ಅಥವಾ ಉಪ–ಸಭಾಪತಿಯ ಹುದ್ದೆಗೆ ಪದಾವಧಿಯ ಮಧ್ಯದಲ್ಲಿ ಚುನಾವಣೆ ನಡೆಸಿದರೆ ಪದಾವಧಿಯ ಉಳಿದ ಅವಧಿಯನ್ನು ಪೂರ್ಣಾವಧಿಯೆಂದೇ ಭಾವಿಸತಕ್ಕದ್ದು.

**29. ಆಕಸ್ಮಿಕ ರಿಕ್ತತೆಗಳನ್ನು ತುಂಬುವುದು** – ಮರಣ, ರಾಜೀನಾಮೆ, ಅನರ್ಹತೆಯ ಕಾರಣದಿಂದಾಗಿ ಅಥವಾ ಇತರ ಯಾವುದೇ ಕಾರಣಗಳಿಗಾಗಿ ನಿರ್ದೇಶಕನ ಹುದ್ದೆಯಲ್ಲಿ ಆಕಸ್ಮಿಕ ರಿಕ್ತತೆ ಉಂಟಾಗಿರುವಲ್ಲಿ, ಉಳಿದ ಅವಧಿಗೆ ಅರ್ಹ ಸದಸ್ಯರುಗಳಿಂದ ಸಹ ಆಯ್ಕೆಯನ್ನು ಮಾಡಿಕೊಳ್ಳುವ ಮೂಲಕ ಮಂಡಲಿಯು ಆಕಸ್ಮಿಕ ರಿಕ್ತತೆಯನ್ನು ಭರ್ತಿ ಮಾಡಿಕೊಳ್ಳಬಹುದು:

ಪರಂತು, ಅಂಥ ರಿಕ್ತತೆಯ ಉಳಿದ ಅವಧಿಯು ಆರು ತಿಂಗಳುಗಳಿಗಿಂತ ಕಡಿಮೆ ಇದ್ದರೆ, ಅಂಥ ಯಾವ ಸಹ ಆಯ್ಕೆಯನ್ನೂ ಮಾಡಿಕೊಳ್ಳತಕ್ಕದ್ದಲ್ಲ.

**30. ಸಭೆಗಳು** –

(1) ಮಂಡಲಿಯು ಒಂದು ವರ್ಷದಲ್ಲಿ ಕಡೆಯ ಪಕ್ಷ ಆರು ಮಂಡಲಿಯ ಸಭೆಗಳನ್ನು ಕರೆತಕ್ಕದ್ದು ಮತ್ತು ಪ್ರತಿ ವರ್ಷ ಸೆಪ್ಟೆಂಬರ್ ತಿಂಗಳ ಮೂವತ್ತರ ಒಳಗಾಗಿ ಒಂದು ಸಾಮಾನ್ಯ ಸಭೆಯನ್ನು ಕರೆಯತಕ್ಕದ್ದು.

(2) ಸಹಕಾರಿಯ ಸದಸ್ಯರುಗಳ ಪೈಕಿ ಹತ್ತನೇ ಒಂದರಷ್ಟು ಸದಸ್ಯರುಗಳಿಗೆ ಕಡಿಮೆ ಇಲ್ಲದ ಸದಸ್ಯರಿಂದ ಅಥವಾ ಉಪವಿಧಿಗಳಲ್ಲಿ ಉಪಬಂಧಿಸಲಾದಂತೆ ಕೋರಿಕೆಯನ್ನು ಸ್ವೀಕರಿಸಿದ ಮೂವತ್ತು ದಿನಗಳೊಳಗೆ ವಿಶೇಷ ಸಾಮಾನ್ಯ ಸಭೆಯನ್ನು ಮಂಡಲಿಯು ಕರೆಯತಕ್ಕದ್ದು. ಅಂಥ ಕೋರಿಕೆಯು ಸಭೆಯನ್ನು ಕರೆಯುವ ಬಗ್ಗೆ ಕಾರಣಗಳನ್ನು ಒಳಗೊಂಡಿರತಕ್ಕದ್ದು. ಮಂಡಲಿಯು ಇದಕ್ಕೆ ತಪ್ಪಿದಲ್ಲಿ ಸಹಕಾರಿಯ ಸದಸ್ಯರುಗಳಲ್ಲಿ ಹತ್ತನೇ ಒಂದರಷ್ಟಕ್ಕೆ ಕಡಿಮೆ ಇಲ್ಲದಂಥ ಸದಸ್ಯರುಗಳು ಸಹಿಮಾಡಿದ ಕೋರಿಕೆಯನ್ನು ಸ್ವೀಕರಿಸಿದ ನಲವತ್ತೈದು ದಿನಗಳೊಳಗೆ ಸಂಯುಕ್ತ ಸಹಕಾರಿಯು ಅಂಥ ಸಾಮಾನ್ಯ ಸಭೆಯನ್ನು ಕರೆಯತಕ್ಕದ್ದು.

(3) ಸಹಕಾರಿ ಮತ್ತು ಸಂಯುಕ್ತ ಸಹಕಾರಿಯು (2)ನೇ ಉಪ–ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಸಮಯದೊಳಗೆ ವಿಶೇಷ ಸಾಮಾನ್ಯ ಸಭೆಯನ್ನು ಕರೆಯಲು ತಪ್ಪಿದರೆ, ರಿಜಿಸ್ಟ್ರಾರನು ಸಹಕಾರಿಯ ಸದಸ್ಯರುಗಳಲ್ಲಿ ಹತ್ತನೆ ಒಂದರಷ್ಟಕ್ಕೆ ಕಡಿಮೆ ಇಲ್ಲದ ಸಂಖ್ಯೆಯ ಸದಸ್ಯರುಗಳು ಸಹಿಮಾಡಿದ ಕೋರಿಕೆಯನ್ನು ಸ್ವೀಕರಿಸಿದ ತರುವಾಯ ತೊಂಬತ್ತು ದಿನಗಳೊಳಗೆ ವಿಶೇಷ ಸಾಮಾನ್ಯ ಸಭೆಯನ್ನು ಕರೆಯತಕ್ಕದ್ದು.

**31. ನೌಕರರು** –

***XX XX XX***

(2) ಮುಖ್ಯ ಕಾರ್ಯನಿರ್ವಾಹಕನು ಸಹಕಾರಿಯ ಮುಖ್ಯ ಆಡಳಿತಾಕಾರಿಯಾಗಿರತಕ್ಕದ್ದು ಮತ್ತು ಮಂಡಲಿಯ ಸಾಮಾನ್ಯ ನಿಯಂತ್ರಣ ಮತ್ತು ಮೇಲ್ವಿಚಾರಣೆಗೆ ಒಳಪಟ್ಟು,–

***XX XX XX***

(ಎಫ್) ವರ್ಷ ಮುಕ್ತಾಯವಾದ ಅರವತ್ತು ದಿನಗಳೊಳಗೆ ಕರಡು ವಾರ್ಷಿಕ ವರದಿ ಮತ್ತು ಹಣಕಾಸು ವಿವರ ಪತ್ರಗಳನ್ನು ಮಂಡಲಿಯ ಅನುಮೋದನೆಗಾಗಿ ಹಾಜರುಪಡಿಸತಕ್ಕದ್ದು;

***XX XX XX***

**32. ದಾಖಲೆಗಳು, ಲೆಕ್ಕಪತ್ರ ಇತ್ಯಾದಿಗಳನ್ನು ಇಡುವುದು.** -

(1) ಪ್ರತಿಯೊಂದು ಸಹಕಾರಿಯು ಅದರ ನೋಂದಾಯಿತ ಕಛೇರಿಯಲ್ಲಿ ಈ ಕೆಳಗಿನವುಗಳನ್ನು ಇಟ್ಟುಕೊಂಡುಬರತಕ್ಕದ್ದು, ಎಂದರೆ,–

***XX XX XX***

(ಡಿ) ವರ್ಷ ಮುಕ್ತಾಯದ ಮೂವತ್ತು ದಿನಗಳೊಳಗೆ ಪ್ರಸಕ್ತ ವರ್ಷದಲ್ಲಿ ಮತ ನೀಡುವ ಹಕ್ಕುಗಳ ಮತ್ತು ವಿವಿಧ ಸೇವೆಗಳ ಸದಸ್ಯವಾರು ಬಳಕೆಯ ಬಗ್ಗೆ ಇಂದಿನವರೆಗಿನ ವಿವರಗಳನ್ನುಳ್ಳ ಸದಸ್ಯರುಗಳ ರಿಜಿಸ್ಟರು;

***XX XX XX***

**32ಎ. ಸಹಕಾರಿಯ ಲಾಭಗಳು ಮತ್ತು ನಷ್ಟಗಳು.**– ಒಂದು ಸಹಕಾರಿಯು, ಯಾವುದೇ ವರ್ಷದಲ್ಲಿನ ತನ್ನ ನಿವ್ವಳ ಲಾಭದಲ್ಲಿ, ಲಾಭದ ಶೇಕಡಾ ಹತ್ತಕ್ಕೆ ಕಡಿಮೆಯಲ್ಲದ ಮೊಬಲಗನ್ನು **"ಕೊರತೆಯನ್ನು ಭರಿಸುವ ನಿಧಿ"** ಎಂದು ಕರೆಯಲಾಗುವ ನಿಧಿಗೆ ವರ್ಗಾಯಿಸತಕ್ಕದ್ದು. ಈ ನಿಧಿಯನ್ನು, ಸಹಕಾರಿಯ ಕಾರ್ಯ ನಿರ್ವಹಣೆಯಲ್ಲಿ ಯಾವುದೇ ನಷ್ಟಗಳು ಉಂಟಾದಲ್ಲಿ ಅವನ್ನು ತೊಡೆದುಹಾಕಲು ಅಥವಾ ವಜಾವಟ್ಟು ಮಾಡಲು ಬಳಸಿಕೊಳ್ಳತಕ್ಕದ್ದು:

ಪರಂತು, ಈ ಪ್ರಕರಣದಲ್ಲಿ ಇರುವ ಯಾವುದೂ, ವಿಶೇಷ ಅಥವಾ ವಾರ್ಷಿಕ ಸಾಮಾನ್ಯ ಸಭೆಯಲ್ಲಿ ತೆಗೆದುಕೊಂಡ ಬಹುಮತದ ತೀರ್ಮಾನಕ್ಕನುಸಾರ, ಸಹಕಾರಿಯು ಉಂಟಾದ ನಷ್ಟದ ಭಾರವನ್ನು ತನ್ನ ಸದಸ್ಯರ ಮೇಲೆ ವಿಧಿಸಿ ವಸೂಲಿ ಮಾಡುವುದಕ್ಕೆ ತಡೆಯುಂಟು ಮಾಡತಕ್ಕದ್ದಲ್ಲ.

**33. ಲೆಕ್ಕಪರಿಶೋಧನೆ.–**

(1) ಸಾಮಾನ್ಯ ಸಭೆಯಲ್ಲಿ ನೇಮಕ ಮಾಡಲ್ಪಡುವ ಲೆಕ್ಕ ಪರಿಶೋಧಕರಿಂದ ಅಥವಾ ಚಾರ್ಟರ್ಡ್ ಅಕೌಂಟೆಂಟಿನಿಂದ ಪ್ರತಿಯೊಂದು ಸಹಕಾರಿಯು ತನ್ನ ಲೆಕ್ಕಪತ್ರಗಳ ಲೆಕ್ಕ ಪರಿಶೋಧನೆಯನ್ನು ನಡೆಸತಕ್ಕದ್ದು.

(2) ಲೆಕ್ಕಪರಿಶೋಧನಾ ವರದಿಯು ಸಹಕಾರಿಯ ಲೆಕ್ಕಪತ್ರಗಳ ಮೇಲಿನ ವರದಿಯ ಜೊತೆಗೆ ಸಭೆಗಳಲ್ಲಿ ನಿರ್ದೇಶಕರುಗಳ ಹಾಜರಾತಿ, ನಿರ್ದೇಶಕರುಗಳಿಗೆ ಮಂಜೂರು ಮಾಡಲಾದ ಸಾಲಗಳು ಮತ್ತು ಮುಂಗಡಗಳು, ಸಹಕಾರಿಯೊಂದಿಗೆ ನಿರ್ದೇಶಕರುಗಳು ನಡೆಸಿದ ವ್ಯವಹಾರ, ಮಂಡಲಿಯ ಸಭೆಗಳ ಸಂಬಂಧದ ವೆಚ್ಚ, ನಿರ್ದೇಶಕರುಗಳಿಗೆ ಸಂದಾಯಮಾಡಲಾದ ಗೌರವಧನ, ನಿರ್ದೇಶಕರುಗಳಿಗೆ ತುಂಬಿಸಿಕೊಡಲಾದ ಖರ್ಚುಗಳು, ಸದಸ್ಯರುಗಳಿಗೆ, ಸಿಬ್ಬಂದಿಗೆ, ನಿರ್ದೇಶಕರುಗಳಿಗೆ ಮತ್ತು ಇತರರಿಗೆ ಶಿಕ್ಷಣ ಹಾಗೂ ತರಬೇತಿ ನೀಡುವುದಕ್ಕೆ ಸಂಬಂಧಿಸಿದ ವೆಚ್ಚ ಇವುಗಳ ವರದಿಯನ್ನು ಸಹ ಒಳಗೊಂಡಿರತಕ್ಕದ್ದು.

(3) ಆ ವರ್ಷ ಮುಕ್ತಾಯವಾದ ಅರವತ್ತು ದಿನಗಳೊಳಗೆ ಲೆಕ್ಕಪರಿಶೋಧನೆಗಾಗಿ ವಾರ್ಷಿಕ ಹಣಕಾಸು ವಿವರಪತ್ರಗಳನ್ನು ಮಂಡಲಿಯು ತಯಾರಿಸತಕ್ಕದ್ದು ಮತ್ತು ಹಾಜರುಪಡಿಸತಕ್ಕದ್ದು. ಲೆಕ್ಕ ಪರಿಶೋಧನೆಯನ್ನು ಉಪವಿಧಿಗಳಲ್ಲಿ ನಿರ್ದಿಷ್ಟ–ಪಡಿಸಬಹುದಾದಂಥ ಅವಧಿಯೊಳಗೆ ಸಂಪೂರ್ಣಗೊಳಿಸತಕ್ಕದ್ದು.

(4) ಲೆಕ್ಕಪರಿಶೋಧಕನಿಗೆ ಅಥವಾ ಚಾರ್ಟರ್ಡ್ ಅಕೌಂಟೆಂಟನಿಗೆ ಸಂದಾಯಮಾಡತಕ್ಕ ಸಂಭಾವನೆಯನ್ನು ನಿರ್ದೇಶಕ ಮಂಡಲಿಯು ನಿರ್ಧರಿಸತಕ್ಕದ್ದು.

(5) ವಾರ್ಷಿಕ ಸಾಮಾನ್ಯ ಸಭೆಯ ಪ್ರತಿಯೊಂದು ನೋಟೀಸನ್ನು ಲೆಕ್ಕಪರಿಶೋಧಕನಿಗೆ ಅಥವಾ ಚಾರ್ಟರ್ಡ್ ಅಕೌಂಟೆಂಟನಿಗೆ ಕಳುಹಿಸತಕ್ಕದ್ದು ಮತ್ತು ಆತನು ಅಂಥ ಸಭೆಗೆ ಹಾಜರಾಗತಕ್ಕದ್ದು.

(6) ಈಗಿನ ಅಥವಾ ಹಿಂದಿನ ಪ್ರತಿಯೊಬ್ಬ ಪದಾಕಾರಿ, ನಿರ್ದೇಶಕ ಅಥವಾ ಸಹಕಾರಿಯ ಪ್ರತಿಯೊಬ್ಬ ನೌಕರನು, ಲೆಕ್ಕಪರಿಶೋಧಕನ ಅಥವಾ ಚಾರ್ಟರ್ಡ್ ಅಕೌಂಟೆಂಟನ ಅಭಿಪ್ರಾಯದಲ್ಲಿ ಪರಿಶೀಲನೆ ನಡೆಸಲು ಮತ್ತು ವರದಿಯನ್ನು ಮಾಡಲು ಅವಶ್ಯಕವಾದಂಥ ಮಾಹಿತಿ ಮತ್ತು ವಿವರಣೆಯನ್ನು ಒದಗಿಸತಕ್ಕದ್ದು ಮತ್ತು ಅವನಿಗೆ ಸಹಕಾರಿಯ ದಾಖಲೆಗಳು, ದಸ್ತಾವೇಜುಗಳು, ಲೆಕ್ಕಪತ್ರಗಳ ಪುಸ್ತಕಗಳು ಮತ್ತು ವೋಚರುಗಳನ್ನು ನೋಡುವ ಅವಕಾಶವನ್ನು ಕೊಡತಕ್ಕದ್ದು.

(7) ಉಪವಿಧಿಗಳಲ್ಲಿ ಗೊತ್ತುಪಡಿಸಲಾದ ಸಮಯದೊಳಗೆ ಸಹಕಾರಿಯು ತನ್ನ ವಾರ್ಷಿಕ ಲೆಕ್ಕಪತ್ರಗಳ ಲೆಕ್ಕಪರಿಶೋಧನೆ ನಡೆಸಲು ತಪ್ಪಿದಲ್ಲಿ, ಸಹಕಾರಿಯ ಲೆಕ್ಕಪತ್ರಗಳ ಲೆಕ್ಕಪರಿಶೋಧನೆ ನಡೆಸುವಂತೆ ಮಾಡುವುದು ಸಂಯುಕ್ತ ಸಹಕಾರಿಯ ಜವಾಬ್ದಾರಿಯಾಗಿರತಕ್ಕದ್ದು. ಅಂಥ ಲೆಕ್ಕಪರಿಶೋಧನೆಯನ್ನು ನಡೆಸುವುದಕ್ಕೆ ತಗಲುವ ವೆಚ್ಚವನ್ನು ಸಂಬಂಧಿಸಿದ ಸಹಕಾರಿಯಿಂದ ವಸೂಲು ಮಾಡತಕ್ಕದ್ದು.

**34. ಮಾಹಿತಿಯನ್ನು ಒದಗಿಸುವುದು.–** ಪ್ರತಿ ವರ್ಷದ ಅಕ್ಟೋಬರ್ ತಿಂಗಳ ಮೂವತ್ತೊಂದನೇ ದಿನಾಂಕದ ಮೊದಲು, ಒಂದು ಸಹಕಾರಿಯು ಈ ಮುಂದಿನ ಮಾಹಿತಿಯನ್ನು ರಿಜಿಸ್ಟ್ರಾರನಿಗೆ ಮತ್ತು ಸಹಕಾರಿ ಬ್ಯಾಂಕಿನ ಸಂದರ್ಭದಲ್ಲಿ ರಿಜರ್ವ್ ಬ್ಯಾಂಕಿಗೆ ಸಹ ಒದಗಿಸತಕ್ಕದ್ದು ಎಂದರೆ –

(ಎ) ಹಿಂದಿನ ವರ್ಷದ ಕಾರ್ಯಚಟುವಟಿಕೆಗಳ ವಾರ್ಷಿಕ ವರದಿ ಮತ್ತು ಮುಂಬರುವ ವರ್ಷದ ಬಗ್ಗೆ ಕಾರ್ಯಕ್ರಮ;

(ಬಿ) ಲೆಕ್ಕಪತ್ರಗಳ ಲೆಕ್ಕಪರಿಶೋಧಿತ ವಿವರ ಪತ್ರ;

***XX XX XX***

**36. ವ್ಯಕ್ತಿಗಳನ್ನು ಮತ್ತು ದಸ್ತಾವೇಜುಗಳನ್ನು ಸಮನುಮಾಡಲು ಮತ್ತು ಪರಿಶೀಲಿಸಲು ಅಧಿಕಾರ.–**

***XX XX XX***

(3) ಈ ಅಧಿನಿಯಮದಡಿ ವಿಚಾರಣೆಯನ್ನು ನಡೆಸುವ ಉದ್ದೇಶಕ್ಕಾಗಿ ಅಂಥ ವಿಚಾರಣೆಯನ್ನು ನಡೆಸುವ ರಿಜಿಸ್ಟ್ರಾರನು ಅಥವಾ ವಿಚಾರಣಾಧಿಕಾರಿಯು,–

***XX XX XX***

(ಸಿ) ವಿಚಾರಣೆಯಲ್ಲಿನ ಆರೋಪಗಳಿಗೆ ಸಂಬಂಧಪಟ್ಟಂತೆ ಸಹಕಾರಿಯ ಯಾವುದೇ ವ್ಯವಹಾರಗಳ ಬಗ್ಗೆ ತಿಳಿದಿದೆಯೆಂದು ತಾನು ನಂಬಲು ಕಾರಣವಿರುವ ಯಾವೊಬ್ಬ ವ್ಯಕ್ತಿಯನ್ನು, ಯಾವುದೇ ಸಾರ್ವಜನಿಕ ಕಛೇರಿಯಲ್ಲಿ ಅಥವಾ ಸಹಕಾರಿಯ ಕೇಂದ್ರ ಕಛೇರಿ ಅಥವಾ ಅದರ ಯಾವುದೇ ಶಾಖೆಯಲ್ಲಿ ತನ್ನ ಮುಂದೆ ಹಾಜರಾಗಲು ಸಮನು ಮಾಡಬಹುದು ಮತ್ತು ಅಂಥ ವ್ಯಕ್ತಿಯನ್ನು ಪ್ರಮಾಣ ಮಾಡಿಸಿ ವಿಚಾರಣೆ ಮಾಡಬಹುದು; ಮತ್ತು

***XX XX XX***

**38. ರದ್ದಿಯಾತಿ.–**

(1) ಒಂದು ಸಹಕಾರಿಯ ಮಂಡಲಿಯು,–

***XX XX XX***

(iv) ಈ ಅಧಿನಿಯಮದ ಉಪಬಂಧಗಳು ಅಥವಾ ನಿಯಮಗಳು ಅಥವಾ ಉಪವಿಧಿಗಳು ಅಥವಾ ಸಂಯುಕ್ತ ಸಹಕಾರಿಯು ಮಾಡಿದ ಯಾವುದೇ ಆದೇಶ ಅಥವಾ ಹೊರಡಿಸಿದ ಯಾವುವೇ ನಿರ್ದೇಶನಗಳಿಗೆ ಅನುಸಾರವಾಗಿ ಕಾರ್ಯನಿರ್ವಹಿಸುತ್ತಿಲ್ಲ; ಅಥವಾ

(v) ವರ್ಷವು ಮುಕ್ತಾಯವಾದ ಆರು ತಿಂಗಳೊಳಗೆ ವಾರ್ಷಿಕ ಸಾಮಾನ್ಯ ಸಭೆಯನ್ನು ನಡೆಸಲು ತಪ್ಪಿದೆ; ಅಥವಾ

(vi) ಅನ್ಯಥಾ ಸರಿಯಾಗಿ ಕಾರ್ಯನಿರ್ವಹಿಸುತ್ತಿಲ್ಲ;

– ಎಂದು ಸಂಯುಕ್ತ ಸಹಕಾರಿಯು ಅಭಿಪ್ರಾಯಪಟ್ಟಲ್ಲಿ, ಅದು ಮಂಡಲಿಯನ್ನು ರದ್ದುಗೊಳಿಸಬಹುದು ಮತ್ತು ಸಂಯುಕ್ತ ಸಹಕಾರಿಯು ನಿರ್ದಿಷ್ಟಪಡಿಸಬಹುದಾದಂತೆ ಆರು ತಿಂಗಳಿಗೆ ಮೀರದ ಅವಧಿಗೆ ಸಹಕಾರಿಯ ವ್ಯವಹಾರಗಳನ್ನು ನಿರ್ವಹಿಸಲು ಆಡಳಿತಗಾರರನ್ನು ನೇಮಕ ಮಾಡಬಹುದು:

ಪರಂತು, ಅಹವಾಲು ಹೇಳಿಕೊಳ್ಳಲು ಮಂಡಲಿಗೆ ಒಂದು ಅವಕಾಶವನ್ನು ಕೊಟ್ಟ ಹೊರತು, ಸಂಯುಕ್ತ ಸಹಕಾರಿಯು ಅಂಥ ಮಂಡಲಿಯನ್ನು ರದ್ದುಗೊಳಿಸತಕ್ಕದ್ದಲ್ಲ.

***XX*** ***XX*** ***XX***

**39. ತೀರ್ಮಾನಕ್ಕಾಗಿ ಕಳುಹಿಸಬಹುದಾದ ವಿವಾದಗಳು –**

(1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಸಹಕಾರಿ ಅಥವಾ ಸಂಯುಕ್ತ ಸಹಕಾರಿಯ ರಚನೆ, ವ್ಯವಸ್ಥಾಪನೆ ಅಥವಾ ವ್ಯವಹಾರಗಳಿಗೆ ಸಂಬಂಧಿಸಿದಂತೆ,–

***XX*** ***XX*** ***XX***

**40. ಕಾಲ ಪರಿಮಿತಿಯ ಅವಧಿ.–**

(1) ವ್ಯಾಜ್ಯ ಕಾರಣ ಉಂಟಾದ ದಿನಾಂಕದಿಂದ ಆರು ವರ್ಷದೊಳಗೆ ವಿವಾದವನ್ನು ರಿಜಿಸ್ಟ್ರಾರನಿಗೆ ಕಳುಹಿಸಿದ ಹೊರತು 39ನೇ ಪ್ರಕರಣದ ಅಡಿಯಲ್ಲಿ ಯಾವುದೇ ವಿವಾದವನ್ನು ಸ್ವೀಕರಿಸತಕ್ಕದ್ದಲ್ಲ;

ಪರಂತು, ಮಂಡಲಿಯ ಅಧ್ಯಕ್ಷ ಅಥವಾ ಸಭಾಪತಿ, ಉಪಾಧ್ಯಕ್ಷ ಅಥವಾ ಉಪ–ಸಭಾಪತಿ ಅಥವಾ ಇತರ ಪದಾಧಿಕಾರಿಯ ಅಥವಾ ನಿರ್ದೇಶಕನ ಚುನಾವಣೆಗೆ ಸಂಬಂಧಿಸಿದ ವಿವಾದವನ್ನು, ಚುನಾವಣೆಯ ಫಲಿತಾಂಶವನ್ನು ಘೋಷಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ರಿಜಿಸ್ಟ್ರಾರನಿಗೆ ಕಳುಹಿಸತಕ್ಕದ್ದು.

***XX*** ***XX*** ***XX***

**42. ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಗೆ ಪ್ರತಿಷೇಧ.–**

(1) ಈ ಅಧಿನಿಯಮದಲ್ಲಿ ಉಪಬಂಧಿಸಿರುವುದನ್ನುಳಿದು–

***XX*** ***XX*** ***XX***

(ಬಿ) ಒಂದು ಮಂಡಲಿಯನ್ನು ಅಥವಾ ಅದರ ನಿರ್ದೇಶಕನನ್ನು ತೆಗೆದುಹಾಕುವುದು;

(ಸಿ) 39ನೇ ಪ್ರಕರಣದ ಅಡಿಯಲ್ಲಿ ರಿಜಿಸ್ಟ್ರಾರನಿಗೆ ಕಳಿಸಬೇಕಾದ ಅಗತ್ಯ ಇರುವ ಯಾವುದೇ ವಿವಾದ;

***XX*** ***XX*** ***XX***

– ಇವುಗಳ ಸಂಬಂಧದಲ್ಲಿ ಯಾವುದೇ ಸಿವಿಲ್ ಅಥವಾ ಕಾರ್ಮಿಕ ಅಥವಾ ರೆವಿನ್ಯೂ ನ್ಯಾಯಾಲಯ ಅಥವಾ ಕೈಗಾರಿಕಾ ನ್ಯಾಯಾಧಿಕರಣವು ಅಧಿಕಾರ ವ್ಯಾಪ್ತಿಯನ್ನು ಹೊಂದಿರತಕ್ಕದ್ದಲ್ಲ.

***XX*** ***XX*** ***XX***

**45. ವಿವಾದಗಳ ಇತ್ಯರ್ಥದ ಕಾರ್ಯವಿಧಾನ ಹಾಗೂ ರಿಜಿಸ್ಟ್ರಾರನ ಅಥವಾ ವಿವಾದವನ್ನು ತೀರ್ಮಾನಕ್ಕಾಗಿ ಕಳಿಸಿರುವ ಬೇರೊಬ್ಬ ವ್ಯಕ್ತಿಯ ಅಧಿಕಾರ.–**

***XX*** ***XX*** ***XX***

(2) ರಿಜಿಸ್ಟ್ರಾರನ ಅಥವಾ ಸಂದರ್ಭಾನುಸಾರ ವಿವಾದವನ್ನು ತೀರ್ಮಾನಿಸುವ ಬೇರೊಬ್ಬ ವ್ಯಕ್ತಿಯ ಅನುಮತಿಯ ಹೊರತು ಯಾವೊಬ್ಬ ಪಕ್ಷಕಾರನು ವಿವಾದದ ವಿಚಾರಣೆಯ ಸಮಯದಲ್ಲಿ ನ್ಯಾಯವಾದಿಯಿಂದ ಪ್ರತಿನಿಧಿತನಾಗತಕ್ಕದ್ದಲ್ಲ.

***XX*** ***XX*** ***XX***

**46. ಅಪೀಲು** – 41ನೇ ಪ್ರಕರಣದ ಅಡಿಯಲ್ಲಿನ ತೀರ್ಮಾನದ ಅಥವಾ ಅವಾರ್ಡಿನ ವಿರುದ್ಧದ ಅಪೀಲನ್ನು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ 2–ಬಿ ಪ್ರಕರಣದ ಅಡಿಯಲ್ಲಿ ರಚಿಸಲಾದ ಕರ್ನಾಟಕ ಸಹಕಾರ ಅಪೀಲು ವಿಚಾರಣಾ ನ್ಯಾಯಾಕರಣಕ್ಕೆ ಸಲ್ಲಿಸತಕ್ಕದ್ದು.

**XX** **XX** **XX**

**53. ಸಂಯುಕ್ತ ಸಹಕಾರಿಯ ರಚನೆ, ಪ್ರಕಾರ್ಯಗಳು ಹಾಗೂ ನಿರ್ವಹಣೆ. –**

**XX** **XX** **XX**

(6) ಒಂದು ಸಹಕಾರಿಯ ಉಪವಿಧಿಗಳನ್ನು ರಚಿಸುವುದಕ್ಕೆ ಸಂಬಂಧಪಟ್ಟ 10ನೇ ಪ್ರಕರಣದ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಸಂಯುಕ್ತ ಸಹಕಾರಿಗೆ ಅನ್ವಯವಾಗತಕ್ಕದ್ದು.

(7) ಸಂಯುಕ್ತ ಸಹಕಾರಿಯು ಈ ಮುಂದಿನ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ–

**XX** **XX** **XX**

(ಟಿ) ಲೆಕ್ಕ ಪರಿಶೋಧಕರ ಹಾಗೂ ಚಾರ್ಟರ್ಡ್ ಅಕೌಂಟೆಂಟರ ಒಂದು ಪಟ್ಟಿಯನ್ನು ಸಿದ್ಧಪಡಿಸಿ, ನೇಮಕಾತಿಗಾಗಿ ಅದನ್ನು ಸದಸ್ಯ ಸಹಕಾರಿಗಳಿಗೆ ಕಳಿಸುವುದು;

**XX** **XX** **XX**

**54. ಸಂಯುಕ್ತ ಸಹಕಾರಿಯ ಮಂಡಲಿ.–**

(1) ಮಂಡಲಿಯು ಸಂಯುಕ್ತ ಸಹಕಾರಿಯ ವ್ಯವಹಾರ ನಿರ್ವಹಣೆಯ ಹೊಣೆ ಹೊಂದಿರತಕ್ಕದ್ದು.

(2) ಮೊದಲನೆಯ ಮಂಡಲಿಯನ್ನು ಹೊರತುಪಡಿಸಿ, ಸಂಯುಕ್ತ ಸಹಕಾರಿಯ ಮಂಡಲಿಯಲ್ಲಿ ರಾಜ್ಯದ ಪ್ರತಿಯೊಂದು ರೆವಿನ್ಯೂ ಜಿಲ್ಲೆಯಿಂದ ಒಬ್ಬ ಪ್ರತಿನಿಧಿ ಇರತಕ್ಕದ್ದು. ಈ ಅಧಿನಿಯಮದ ಅಡಿಯಲ್ಲಿ ಯಾವುದೇ ಜಿಲ್ಲೆಯಲ್ಲಿ ಸಹಕಾರಿಗಳು ನೋಂದಾಯಿತವಾಗಿರದಿದ್ದರೆ ಅಥವಾ ನಿರ್ದೇಶಕರಾಗಿ ಚುನಾಯಿತರಾಗಲು ಅರ್ಹ ವ್ಯಕ್ತಿಗಳಿಲ್ಲದಿದ್ದರೆ ಅಂಥ ಜಿಲ್ಲೆಗೆ ಪ್ರಾತಿನಿಧ್ಯ ನೀಡತಕ್ಕದ್ದಲ್ಲ.

(3) ಸಂಯುಕ್ತ ಸಹಕಾರಿಯ ಮಂಡಲಿಯ ಪದಾವಧಿಯು ಪದಧಾರಣ ಮಾಡಿದ ದಿನಾಂಕದಿಂದ ಐದು ವರ್ಷಗಳಾಗಿರತಕ್ಕದ್ದು.

(4) ಮುಖ್ಯ ಕಾರ್ಯನಿರ್ವಾಹಕನು ಮಂಡಲಿಯ ಪದನಿಮಿತ್ತ ನಿರ್ದೇಶಕನಾಗಿರತಕ್ಕದ್ದು ಹಾಗೂ ಪದಾಕಾರಿಗಳ ಚುನಾವಣೆಯಲ್ಲಿ ಮತದಾನದ ಹಕ್ಕನ್ನು ಹೊಂದಿರತಕ್ಕದ್ದಲ್ಲ.

**55. ಚುನಾಯಿತನಾಗಲು ಅಥವಾ ನಿರ್ದೇಶಕನಾಗಿ ಮುಂದುವರಿಯಲು ಅನರ್ಹತೆ.–**

**XX** **XX** **XX**

(2) ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಅನರ್ಹತೆಗಳ ಜೊತೆಗೆ ನಿರ್ದೇಶಕರು, ಸಂಯುಕ್ತ ಸಹಕಾರಿ ಅಥವಾ ಯಾವುದೇ ಇತರ ಸಹಕಾರಿಯ ನಿರ್ದೇಶಕರಾಗಿ ತಮ್ಮ ಪದಾವಧಿಯಲ್ಲಿ –

(i) ಮಂಡಲಿಯ ಪದಾವಧಿ ಮುಕ್ತಾಯವಾಗುವುದರೊಳಗಾಗಿ ಚುನಾವಣೆ ನಡೆಸದಿದ್ದರೆ;

(ii) ವರ್ಷವು ಮುಕ್ತಾಯವಾದ ತರುವಾಯದ ಆರು ತಿಂಗಳೊಳಗಾಗಿ ವಾರ್ಷಿಕ ಸಾಮಾನ್ಯ ಸಭೆಯನ್ನು ಅಥವಾ ನಿರ್ದಿಷ್ಟ ಸಮಯದೊಳಗಾಗಿ ಕೋರಲಾದ ಸಾಮಾನ್ಯ ನಿಕಾಯದ ಸಭೆಯನ್ನು ನಡೆಸದಿದ್ದರೆ;

(iii) ವಾರ್ಷಿಕ ಸಾಮಾನ್ಯ ಸಭೆಯಲ್ಲಿ ಲೆಕ್ಕಪರಿಶೋಧಕರ ಅಥವಾ ಸಂದರ್ಭಾನುಸಾರ ಚಾರ್ಟರ್ಡ್ ಅಕೌಂಟೆಂಟರ ವರದಿಗಳೊಂದಿಗೆ ಹಿಂದಿನ ವರ್ಷದ ಲೆಕ್ಕಪರಿಶೋಧಿತ ಲೆಕ್ಕಪತ್ರಗಳನ್ನು ಮಂಡಿಸದಿದ್ದರೆ,

–ಸಂಯುಕ್ತ ಸಹಕಾರಿಯ ನಿರ್ದೇಶಕರಾಗಿ ಚುನಾಯಿತರಾಗುವುದಕ್ಕೆ ಅನರ್ಹರಾಗಿರತಕ್ಕದ್ದು.

**XX** **XX** **XX**

**56. ಮಂಡಲಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** ಸಂಯುಕ್ತ ಸಹಕಾರಿಯ ಮಂಡಲಿಯು ಈ ಅಧಿನಿಯಮ, ನಿಯಮಗಳು ಮತ್ತು ಉಪವಿಧಿಗಳ ಅಡಿ ಸಂಯುಕ್ತ ಸಹಕಾರಿಗೆ ಪ್ರದತ್ತವಾದ ಎಲ್ಲ ಅಧಿಕಾರಗಳನ್ನು ಚಲಾಯಿಸುವುದಕ್ಕೆ ಮತ್ತು ಎಲ್ಲ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕೆ ಮತ್ತು,–

(ಎ) ಅಧ್ಯಕ್ಷ ಅಥವಾ ಸಭಾಪತಿ, ಉಪಾಧ್ಯಕ್ಷ ಅಥವಾ ಉಪ–ಸಭಾಪತಿ ಮತ್ತು ಇತರ ಪದಾಧಿಕಾರಿಗಳನ್ನು ಚುನಾಯಿಸುವುದಕ್ಕೆ;

**XX** **XX** **XX**

**57. ಅಧ್ಯಕ್ಷ ಅಥವಾ ಸಭಾಪತಿ, ಉಪಾಧ್ಯಕ್ಷ ಅಥವಾ ಉಪ–ಸಭಾಪತಿ ಮತ್ತು ಇತರ ಪದಾಧಿಕಾರಿಗಳ ಅಧಿಕಾರಗಳ ಮತ್ತು ಪ್ರಕಾರ್ಯಗಳು. –**

**XX** **XX** **XX**

(3) ಅಧ್ಯಕ್ಷ ಅಥವಾ ಸಭಾಪತಿ ಮತ್ತು ಉಪಾಧ್ಯಕ್ಷ ಅಥವಾ ಉಪಸಭಾಪತಿಯ ಪದಾವಧಿಯು ಚುನಾವಣಾ ದಿನಾಂಕದಿಂದ ಎರಡೂವರೆ ವರ್ಷಗಳಾಗಿರತಕ್ಕದ್ದು.

ವಿವರಣೆ: – ಅಧ್ಯಕ್ಷ ಅಥವಾ ಸಭಾಪತಿ, ಉಪಾಧ್ಯಕ್ಷ ಅಥವಾ ಉಪ–ಸಭಾಪತಿಯ ಹುದ್ದೆಗೆ ಪದಾವಧಿಯ ಮಧ್ಯದಲ್ಲಿ ಚುನಾವಣೆ ನಡೆಸಿದರೆ ಪದಾವಧಿಯ ಉಳಿದ ಅವಧಿಯನ್ನು ಪೂರ್ಣಾವಧಿಯೆಂದೇ ಭಾವಿಸತಕ್ಕದ್ದು.

**58. ಚುನಾವಣೆಗಳು –**

(1) ಸಂಯುಕ್ತ ಸಹಕಾರಿಯ ನಿರ್ದೇಶಕರ ಮಂಡಲಿಗೆ ಚುನಾವಣೆ ನಡೆಸುವುದು ಸಂಯುಕ್ತ ಸಹಕಾರಿಯ ಸಹಕಾರಿಯ ಕರ್ತವ್ಯನಿರತ ಮಂಡಲಿಯ ಜವಾಬ್ದಾರಿಯಾಗಿರತಕ್ಕದ್ದು. ಚುನಾವಣೆಗಳನ್ನು, ನಿರ್ಗಮಿಸುವ ನಿರ್ದೇಶಕರ ಪದಾವಧಿ ಮುಕ್ತಾಯವಾಗುವ ಮೊದಲು, ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಲಾದ ವಿಧಾನದಲ್ಲಿ ನಡೆಸತಕ್ಕದ್ದು. ರಿಜಿಸ್ಟ್ರಾರನು ಅಂಥ ಚುನಾವಣೆಗಳನ್ನು ನಡೆಸುವುದಕ್ಕಾಗಿ ಚುನಾವಣಾ ಅಧಿಕಾರಿಯನ್ನು ನೇಮಕ ಮಾಡತಕ್ಕದ್ದು.

(2) ಹೊಸದಾಗಿ ಚುನಾಯಿತರಾದ ನಿರ್ದೇಶಕರು, ನಿರ್ಗಮಿಸುವ ಮಂಡಲಿಯ ಅವಧಿ ಮುಕ್ತಾಯವಾದ ಕೂಡಲೇ ಹುದ್ದೆಯನ್ನು ವಹಿಸಿಕೊಳ್ಳತಕ್ಕದ್ದು.

(3) ನಾಮನಿರ್ದೇಶನಗಳ ಸಂಖ್ಯೆಯು ಚುನಾಯಿಸಬೇಕಾದ ನಿರ್ದೇಶಕರ ಸಂಖ್ಯೆಗಿಂತ ಹೆಚ್ಚಾದರೆ, ನಿರ್ದೇಶಕರ ಚುನಾವಣೆಯನ್ನು ರಹಸ್ಯ ಮತದಾನದ ಮೂಲಕ ನಡೆಸತಕ್ಕದ್ದು.

**59. ಅಕಸ್ಮಿಕ ರಿಕ್ತತೆಗಳನ್ನು ಭರ್ತಿ ಮಾಡುವುದು.–**

(1) ಮರಣ, ರಾಜೀನಾಮೆ ಮತ್ತು ಅನರ್ಹತೆಯ ಕಾರಣದಿಂದಾಗಿ ಮಂಡಲಿಯಲ್ಲಿ ಯಾವುದೇ ಆಕಸ್ಮಿಕ ರಿಕ್ತತೆ ಇದ್ದಾಗ ಮತ್ತು,

(i) ನಿರ್ದೇಶಕರ ಕೋರಂ ಇದ್ದರೆ, ಮಂಡಲಿಯು ಉಳಿದ ಅವಧಿಗೆ ಸದಸ್ಯನನ್ನು ಸಹ ಆಯ್ಕೆ ಮಾಡಿಕೊಳ್ಳುವ ಮೂಲಕ ಆಕಸ್ಮಿಕ ರಿಕ್ತತೆಯನ್ನು ತುಂಬತಕ್ಕದ್ದು:

ಪರಂತು, ಉಳಿದ ಅವಧಿಯು ಆರು ತಿಂಗಳಿಗಿಂತ ಕಡಿಮೆ ಇದ್ದರೆ ಹಾಗೆ ಸಹ ಆಯ್ಕೆಯನ್ನು ಮಾಡಿಕೊಳ್ಳತಕ್ಕದಲ್ಲ; ಅಥವಾ

(ii) ನಿರ್ದೇಶಕರ ಕೋರಂ ಇಲ್ಲದಿದ್ದರೆ, ಉಳಿದ ಅವಧಿಗೆ ರಿಕ್ತತೆಯನ್ನು ತುಂಬುವುದಕ್ಕಾಗಿ ಮುಖ್ಯ ಕಾರ್ಯನಿರ್ವಾಹಕರು ಕೂಡಲೇ ನಿರ್ದೇಶಕರ ಚುನಾವಣೆಗೆ ಒಂದು ಸಾಮಾನ್ಯ ಸಭೆ ಕರೆಯಲು ಕ್ರಮ ಕೈಗೊಳ್ಳತಕ್ಕದ್ದು.

**60. ಸಭೆಗಳು.–**

(1) ಮಂಡಲಿಯ ಸಭೆಗಳ ಮತ್ತು ಸಾಮಾನ್ಯ ಸಭೆಗಳ ಸಂಖ್ಯೆಯನ್ನು ಸಂಯುಕ್ತ ಸಹಕಾರಿಯ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸತಕ್ಕದ್ದು:

ಪರಂತು ಒಂದು ವರ್ಷದಲ್ಲಿ, ಮಂಡಲಿಯ ಆರು ಸಭೆಗಳಿಗಿಂತ ಮತ್ತು ಒಂದು ಸಾಮಾನ್ಯ ಸಭೆಗಿಂತ ಕಡಿಮೆ ಸಭೆಗಳನ್ನು ನಡೆಸತಕ್ಕದ್ದಲ್ಲ.

(2) ಮಂಡಲಿಯು, ಸಂಯುಕ್ತ ಸಹಕಾರಿಯ ಸದಸ್ಯರ ಪೈಕಿ ಹತ್ತನೇ ಒಂದು ಭಾಗಕ್ಕಿಂತ ಕಡಿಮೆಯಿಲ್ಲದ ಸದಸ್ಯರು ವಿಶೇಷ ಸಾಮಾನ್ಯ ಸಭೆ ನಡೆಸುವಂತೆ ಸಲ್ಲಿಸಿದ ಕೋರಿಕೆ ಸ್ವೀಕರಿಸಿದ ಮೂವತ್ತು ದಿನಗಳೊಳಗಾಗಿ ಅಥವಾ ಉಪವಿಧಿಗಳಲ್ಲಿ ಉಪಬಂಧಿಸಲಾದಂತೆ ಒಂದು ವಿಶೇಷ ಸಾಮಾನ್ಯ ಸಭೆಯನ್ನು ನಡೆಸತಕ್ಕದ್ದು ಮತ್ತು ಅಂಥ ಯಾವುದೇ ಕೋರಿಕೆಯಲ್ಲಿ ಹಾಗೆ ಸಭೆ ನಡೆಸುವುದಕ್ಕೆ ಕಾರಣಗಳನ್ನು ತಿಳಿಸಿರತಕ್ಕದ್ದು.

(3) ಹಾಗೆ ಸಭೆಯನ್ನು ಕರೆಯಲು ಸಂಯುಕ್ತ ಸಹಕಾರಿಯು ತಪ್ಪಿದ ಸಂದರ್ಭದಲ್ಲಿ ರಿಜಿಸ್ಟ್ರಾರನು ಸಂಯುಕ್ತ ಸಹಕಾರಿಯ ಸದಸ್ಯರ ಪೈಕಿ ಹತ್ತನೇ ಒಂದು ಭಾಗಕ್ಕಿಂತ ಕಡಿಮೆ ಇಲ್ಲದ ಸದಸ್ಯರು ತನಗೆ ಸಲ್ಲಿಸಿದ ಕೋರಿಕೆಯನ್ನು ಸ್ವೀಕರಿಸಿದ ದಿನಾಂಕದಿಂದ ಅರವತ್ತು ದಿನಗಳೊಳಗಾಗಿ ಅಂಥ ಸಾಮಾನ್ಯ ಸಭೆಯನ್ನು ನಡೆಸತಕ್ಕದ್ದು.

***XX*** ***XX*** ***XX***

**61. ಸಂಯುಕ್ತ ಸಹಕಾರಿಯ ನೌಕರರು.–**

***XX*** ***XX*** ***XX***

. (2) ಮುಖ್ಯ ಕಾರ್ಯನಿರ್ವಾಹಕನು ಉಪವಿಧಿಗಳ ಅನುಸಾರ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು ಮತ್ತು–

***XX*** ***XX*** ***XX***

(ಎಲ್) ಲೆಕ್ಕ ಪರಿಶೋಧನೆಯ ಸಮಯದಲ್ಲಿ ರಿಜಿಸ್ಟರುಗಳನ್ನು ಮತ್ತು ಲೆಕ್ಕ ಪತ್ರಗಳನ್ನು ಲೆಕ್ಕಪರಿಶೋಧಕನಿಗೆ ಅಥವಾ ಚಾರ್ಟರ್ಡ್ ಅಕೌಂಟೆಂಟನಿಗೆ ಒದಗಿಸತಕ್ಕದ್ದು; ಮತ್ತು

***XX*** ***XX*** ***XX***

**62. ಸಂಯುಕ್ತ ಸಹಕಾರಿಯ ನಿಧಿಗಳು –**

***XX*** ***XX*** ***XX***

(2) ಸಂಯುಕ್ತ ಸಹಕಾರಿ ನಿಧಿಯು,–

***XX*** ***XX*** ***XX***

(ii) ಪ್ರತಿ ವರ್ಷ ಸಂಯುಕ್ತ ಸಹಕಾರಿಯ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಲಾದಂಥ ದರಗಳಲ್ಲಿ ಪ್ರತಿಯೊಂದು ಸದಸ್ಯ ಸಹಕಾರಿಯು ನೀಡಿದ ವಂತಿಗೆಯನ್ನು,

–ಹೊಂದಿರತಕ್ಕದ್ದು.

***XX*** ***XX*** ***XX***

63. **ಲೆಕ್ಕಪತ್ರಗಳು.–** ಸಂಯುಕ್ತ ಸಹಕಾರಿಯು ಈ ಮುಂದಿನ ದಾಖಲೆಗಳನ್ನು ಮತ್ತು ಲೆಕ್ಕಪುಸ್ತಕಗಳನ್ನು ನಿರ್ವಹಿಸತಕ್ಕದ್ದು, ಎಂದರೆ–

***XX*** ***XX*** ***XX***

(ಹೆಚ್) ವರ್ಷ ಮುಕ್ತಾಯವಾಗುವ ಮೂವತ್ತು ದಿನಗಳೊಳಗಾಗಿ ಪ್ರಸಕ್ತ ವರ್ಷದ ಮತದಾನದ ಹಕ್ಕುಳ್ಳ ಸದಸ್ಯರ ಇಂದಿನವರೆಗಿನ ಪಟ್ಟಿ;

***XX*** ***XX*** ***XX***

64. **ಲೆಕ್ಕ ಪರಿಶೋಧನೆ.–** ಸಂಯುಕ್ತ ಸಹಕಾರಿಯ ಲೆಕ್ಕಪತ್ರಗಳನ್ನು ಪ್ರತಿ ವರ್ಷ ಸಂಯುಕ್ತ ಸಹಕಾರಿಯು ನೇಮಕ ಮಾಡುವ ಲೆಕ್ಕ ಪರಿಶೋಧಕ ಅಥವಾ ಚಾರ್ಟರ್ಡ್ ಅಕೌಂಟೆಂಟನಿಂದ ಲೆಕ್ಕ ಪರಿಶೋಧನೆ ಮಾಡಿಸತಕ್ಕದ್ದು.

***XX*** ***XX*** ***XX***

68. **ಅಪರಾಧಗಳು ಮತ್ತು ದಂಡಗಳು.–**

***XX*** ***XX*** ***XX***

(2) ಸಹಕಾರಿ ಅಥವಾ ಸಂಯುಕ್ತ ಸಹಕಾರಿಯ ಪದಾಧಿಕಾರಿ, ಒಬ್ಬ ಮುಖ್ಯ ಕಾರ್ಯನಿರ್ವಾಹಕ, ಒಬ್ಬ ನಿರ್ದೇಶಕ ಅಥವಾ ಯಾವೊಬ್ಬ ನೌಕರನು ಈ ಅಧಿನಿಯಮದಡಿಯಲ್ಲಿ ಅಗತ್ಯಪಡಿಸಿದ ಯಾವುದೇ ಕೃತ್ಯವನ್ನು ಮಾಡಲು ವಿಫಲನಾದರೆ ಅಥವಾ ಈ ಅಧಿನಿಯಮ ಅಥವಾ ಉಪವಿಧಿಗಳ ಮೂಲಕ ನಿಷೇಧಿಸಲಾದ ಯಾವುದೇ ಕೃತ್ಯವನ್ನು ಮಾಡಲು ಅನುಮತಿ ನೀಡಿದರೆ ಅಥವಾ ರಚನೆ, ವ್ಯವಸ್ಥಾಪನೆ ಮತ್ತು ವ್ಯವಹಾರಕ್ಕೆ ಸಂಬಂಧಿಸಿದ ಕರ್ತವ್ಯಗಳನ್ನು ನೆರವೇರಿಸಲು ವಿಫಲನಾದರೆ ಅಥವಾ ಮೋಸದ ಚಟುವಟಿಕೆಗಳಲ್ಲಿ ತೊಡಗಿದರೆ ಅಥವಾ ನಿಧಿ ಮತ್ತು ಸ್ವತ್ತುಗಳನ್ನು ದುರುಪಯೋಗಪಡಿಸಿಕೊಂಡರೆ ಅಥವಾ ನಿರ್ದೇಶಕ ಮಂಡಲಿಯ ಚುನಾವಣೆಯನ್ನು ನಡೆಸುವಲ್ಲಿ ಜನತಾ ಪ್ರಾತಿನಿಧ್ಯ ಅಧಿನಿಯಮದ (1951ರ ಕೇಂದ್ರ ಅಧಿನಿಯಮ 43) 123ನೇ ಪ್ರಕರಣದ ಅಡಿಯಲ್ಲಿ ಪರಿಭಾಷಿಸಲಾದಂತೆ ಭ್ರಷ್ಟಾಚಾರ ಚಟುವಟಿಕೆಗಳಲ್ಲಿ ತೊಡಗಿದರೆ ಅಥವಾ 35ನೇ ಮತ್ತು 65ನೇ ಪ್ರಕರಣದ ಅಡಿಯಲ್ಲಿ ವಿಚಾರಣೆಯನ್ನು ನಡೆಸುತ್ತಿರುವ ವ್ಯಕ್ತಿಯ ಮುಂದೆ ಮತ್ತು 33ನೇ ಮತ್ತು 64ನೇ ಪ್ರಕರಣದ ಅಡಿಯಲ್ಲಿನ ಲೆಕ್ಕಪರಿಶೋಧನೆಗೆ ಮಾಹಿತಿ ನೀಡಲು ಅಥವಾ ಪುಸ್ತಕಗಳು ಅಥವಾ ದಾಖಲೆಗಳನ್ನು ಹಾಜರುಪಡಿಸಲು ಅಥವಾ ನೆರವು ನೀಡಲು ತಪ್ಪಿದರೆ ಅಥವಾ ವೈಯಕ್ತಿಕವಾಗಿ ಹಾಜರಾಗಲು ವಿಫಲನಾದರೆ ಅಥವಾ ಸಂಯುಕ್ತ ಸಹಕಾರಿಯ "ಸಂಯುಕ್ತ ಸಹಕಾರಿ ನಿಧಿಗೆ" ವಂತಿಗೆ ನೀಡಲು ತಪ್ಪಿದರೆ, ಅವನು ಹತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಇವೆರಡರಿಂದಲೂ ದಂಡಿತನಾಗತಕ್ಕದ್ದು.

***XX*** ***XX*** ***XX***

## *KARNATAKA LEGISLATIVE ASSEMBLY*

### *THIRTEENTH LEGISLATIVE ASSEMBLY*

### *FIFTEENTH SESSION*

## *THE KARNATAKA SOUHARDA SAHAKARI (AMENDMENT) BILL, 2012*

### *(L.A. Bill No. 42 of 2012)*

A Bill further to amend the Karnataka Souharda Sahakari Act, 1997.

Whereas it is expedient further to amend the Karnataka Souharda Sahakari Act, 1997 (Karnataka Act No 17 of 2000) for the purposes herein after appearing;

Be it enacted by the Karnataka State Legislature in the sixty third year of the Republic of India as follows:-

***1. Short title and commencement***:- (1) This Act may be called the Karnataka Souharda Sahakari (Amendment) Act, 2012 .

(2) It shall come into force on such date as the State Government may by notification, appoint.

***2. Amendment of section-2:-*** In section 2 of the Karnataka Souharda Sahakari Act, 1997 (Karnataka Act No. 17 of 2000) (hereinafter referred to as the Principal Act),-

(i) for clause (a), the following shall be substituted; namely:-

"(a) ***'apex cooperative'*** means a co-operative whose membership is open to co-operatives only and whose area of operation extends to the whole of the State.

(a1) '***Area of operation'*** means jurisdictional area from which the membership is drawn or as specified in the bye-laws of the cooperatives."

(a2) ***'Backward Classes'*** means such class or classes of citizens as may be classified as Backward Classes notified by the Government from time to time."

(a3) ***'Board'*** means the board of directors or the governing body of a cooperative or a federal cooperative by whatever name called, to which the direction and control of the management of the affairs of the cooperative is entrusted to"

(ii) after clause (ee) the following shall be inserted, namely:-

"(e1) '***Cooperative Election Commission'*** means the cooperative election commission constituted under section 39AA of the Karnataka Co-operative Societies Act, 1959(Karnataka Act 11 of 1959);"

(iii) in clause (j), the words "or year" shall be omitted;

(iv) in clause (r), the words "and an associate" shall be omitted;

(v) in clause (s), after the word "vice- chairperson", the words, "elected Secretary or Treasurer, Special Officer" shall be inserted.

(vi) after clause (k) the following shall be inserted, namely:- "(k1)'***delegate'*** means a member of a cooperative to represent that cooperative in other cooperatives"

(vii) after clause (l), the following shall be inserted, namely:-

"(l1) ***'Director of cooperative audit'*** means the Director of cooperative audit as defined in clause (a-4) of section 2 of the Karnataka cooperative Societies Act 1959 (Karnataka Act No. 11 of 1959)"

(viii) after clause (u), the following shall be inserted, namely:-

"(u1)'***Representative***' means a person elected by a group of individual members of a primary cooperative or a secondary cooperative to represent them and participate on their behalf in the representative general body meeting of the cooperative in accordance with this Act, or the rules and the bye-laws made there under.

(u2)'***Representative General Body'*** means all the representatives of a primary cooperative or a secondary cooperative.

(u3) '***Representative General Meeting'*** means a meeting of the representatives called and conducted in accordance with provisions of the Act, the rules and the bye-laws of the primary cooperative or the secondary cooperative."

(ix) after clause (w) the following shall be inserted, namely:-

"(w1)***'State Level Cooperative'*** means a cooperative whose area of operation extends to the whole of the State."

(x) in clause (y), for the word "five", the word "twenty" shall be substituted.

***3. Amendment of section 4.-*** In section 4 of the Principal Act, in sub-section (2), in clause (c), for the words "five or more cooperatives", the words "twenty or more cooperatives" shall be substituted.

***4. Amendment of section 5.-*** In section 5 of the Principal Act, in sub-section (3), in the proviso, for the words "either a proposed or an existing" the words "a proposed" shall be substituted.

***5. Amendment of section 10.-*** In section 10 of the Principal Act, in sub- section (2),-

(i) in clause (iiia), for the words "nominal and associate members", the words 'nominal members' shall be substituted;

(ii) in clause (x), after the words "number of office bearers", the words "and the powers, functions and duties of the board" shall be inserted.

(iii) after clause (x), the following shall be inserted, namely:–

"(x-a) the travelling allowance, daily allowance, sitting fee and other allowances of the directors."

(iv) for clause (xxi), the following shall be substituted; namely:-

"(xxi) appropriation of amount out of the net profit specifically for the following:-

(a) twenty five percent towards the reserve fund constituted by the co-operative;

(b) two percent towards the cooperative education fund to the Karnataka State Souharda Federal cooperative.

provided that no cooperative which has failed to contribute to the cooperative Education Fund shall pay dividend to its members.

(c) twenty percent towards the operational reserve to meet unforeseen losses or contingencies;

(d) five percent towards the Common Good Fund whose purpose is approved by the general body;

(e) constitution of, or contribution to, such special funds as may be specified in the bye-laws.

(f) bonus not exceeding two months' pay to be paid to the employees;

(g) dividend to the members."

***6. Insertion of new section 19A.-*** After section 19 of the Principal Act, the following shall be inserted, namely:–

***"19A. Deduction from salary to meet cooperatives' claim in certain cases.-*** (1) A member of a cooperative may execute an agreement in favour of the cooperative providing that his employer shall be competent to deduct from the salary or wages payable to him by the employer, such amount as may be specified in the agreement, and to pay the amount so deducted to the cooperative in satisfaction of any debt or other demand owing by the member to the cooperative.

Provided that the employee shall obtain prior concurrence in writing of the employer agreeing to deduct from his salary or wages such an amount as specified in such agreement.

Provided further that the liability of the employer shall be limited to the extent of deduction of an amount which if included makes the total of all the deductions from the salary not to exceed fifty percent of the salary of the employee.

Provided also that the board of the cooperative shall determine the amount of loan and the number of installments to be granted to the employee in such a manner that the total of all deductions including the deduction on account of the loan installment along with interest thereon shall not exceed fifty percent of the salary of the employee.

(2) On the execution of such an agreement, the employer shall, if so required by the co-operative by requisition in writing and so long as such debt or demand or any part of it remains unpaid, make the deduction in accordance with the agreement and pay the amounts so deducted to the cooperative within fourteen days from the date of the deduction.

(3) Nothing contained in this section shall apply to persons employed in railways as defined in Article 366 of the constitution, mines and oil fields."

***7. Amendment of section 20.-*** In section 20 of the Principal Act,-

(i) in sub-section(2), in clause (a), for the word 'years', the words 'cooperative years' shall be substituted.

(ii) after sub-section(2), the following shall be inserted, namely:-

"(2A) No cooperative shall, without sufficient cause in writing, refuse admission to membership to any person under the provisions of this Act or the Rules and the bye-laws made there under The board of the cooperative shall send a written communication of its decision to such person within sixty days from the date of receipt of his application".

***8. Omission of section 21.-*** Section 21 of the Principal Act shall be omitted.

***9. Substitution of section 21A.-*** For section 21A of the Principal Act, the following shall be substituted, namely:–

***"21A – Nominal members.-*** (1) A cooperative may, in its interest, admit,-

(a) any person;

(b) any firm, company, cooperative society or cooperative or any body or corporation constituted by or under any law for the time being in force

as a nominal member for a period not exceeding three years for a specific purpose mentioned in the bye-laws.

Provided that such person or institution has any kind of business relationship with the cooperative or who or which is in need of the services of the cooperative or who or which is in a position to provide services required by the cooperative.

Provided further that a person who is eligible for membership under section 20 shall not be admitted as a nominal member.

(2) A nominal member shall not be entitled to any share in any form whatsoever in the assets or profits of the cooperative and shall not have the right to participate in the management and to vote at any meeting of the co-operative including the election to the board of the co-operative and shall not be eligible to be elected as a director or an office-bearer of the cooperative.

(3) A nominal member shall have such rights and privileges and be subject to such liabilities as may be specified in the byelaws of the cooperative".

***10. Amendment of Section 23.–*** In section 23 of the Principal Act,-

(i) in sub-section (3), for clause (a), the following shall be inserted; namely:-

"(a) consideration of the annual report of the preceding cooperative year submitted by the board;

(b) appointment and removal of the auditor and internal auditor for the audit of accounts of the current year;

(c) consideration of the audit report and audited financial statements for the preceding cooperative year;

(d) consideration and decision on the compliance report submitted by the board regarding the rectification of defects and remedying the irregularities pointed out in the audit report of the preceding cooperative year;

(e) disposal of the surplus or net profits of the preceding cooperative year".

(ii) clauses (b), (c), (d) and (e) shall be omitted.

(iii) for clause (h), the following shall be substituted, namely:-

"(h) approval of the annual budget for the next cooperative year"

(iv) for clause (k), the following shall be substituted ; namely:-

"(k) review of the use of the services of the cooperative by the directors of the board;

(k-1) consideration of the loans and advances made to the directors and their relatives, the defaults, if any, and the action taken for recovery thereof;

(k-2) amalgamation, division, merger, transfer of assets and liabilities;

(k-3) decision on bad debts considered as irrecoverable;

(k-4) decision on the appeal filed by an employee who has been removed or dismissed or terminated from the service or who has been imposed a major penalty by the board after holding a disciplinary inquiry".

(v) in clause (l), the words "and filling up of casual vacancies" shall be omitted.

(vi) in clause (p), the words "or whose membership has been removed" shall be omitted.

(vii) in clause (t), for the words "preceding year", the words "preceding cooperative year" shall be substituted.

***11. Insertion of new sections 23A and 23B.-*** After section 23 of the Principal Act the following shall be inserted, namely:-

***"23A - Opening of branches by a Cooperative in its area of operation.-***A cooperative may commence branches, sub branches, pay offices or offices called by whatever name in the area of operation for the use of its members only with the prior approval of its general meeting and the federal cooperative.

***23B – Representative General body meeting.-***The general body of a primary or secondary cooperative, whose membership exceeds three thousand or whose area of operation is more than a Taluka, may amend its bye-laws providing for the constitution of a smaller body consisting of such number of members of the cooperative as may be prescribed, elected in accordance with the rules (hereinafter referred to as the representative general body) to exercise all or any of the powers of the general body as may be specified in the bye-laws and any reference, by whatever form or words in this Act to the general body or a meeting thereof shall have effect as if such reference were a reference to the representative general body or a meeting thereof, as the case may be".

***12. Substitution of Section 24.-*** For section 24 of the Principal Act, the following shall be substituted, namely:-

***"24. Constitution of the Board.-*** of every cooperative shall consist of not less than eleven but not exceeding the number of members specified below excluding the chief executive namely:-

(1) in case of a primary cooperative and a secondary cooperative whose area of operation extends to,-

a) a part of taluk, eleven members;

b) whole of taluk, thirteen members;

c) beyond a taluk but not beyond a district, fifteen members;

Provided that in case of an urban cooperative bank having an area of operation not beyond a district, the maximum number shall not exceed seventeen members.

d) beyond a district, seventeen members

e) in the case of a union cooperative, nineteen members

f) in the case of an apex cooperative including the federal cooperative, twenty one members.

Provided that one seat shall be reserved in favour of members belonging to scheduled castes or the scheduled tribes, two seats shall be reserved in favour of women members and two seats in favour of members belonging to backward classes on the board of every cooperative consisting of individuals as members and having members from such class or category of persons.

Provided further, that every cooperative shall co-opt persons having experience in the field of banking management, finance or specialization in any other field relating to the objects and activities undertaken by the cooperative, as members of the board of such cooperative and such co-opted members shall not have the right to vote in any election of the cooperative in their capacity as such member or to be eligible to be elected as office bearers of the board.

